ಓಂ ನಮಃ ಸುಖಾಯ !  ಓಂ ನಮೋ ನಾನವೆ !!



# ಆತ್ಮ ಸಂಶೋಧನೆ


ಲೇಖಕರು :

ಶ್ರೀ ಸುರೇಂದ್ರ ಶಿವರಾವ ದೇಸಾಯಿ ಎಮ್.ಎ.

ಧಾರವಾಡ ( ಜಮ್ಮೀಹಾಳ )



ಗ್ರಂಥ ಪೋಷಕರು ।

ಶ್ರೀ ಬಸವಣ್ಣೆಪ್ಪ ಬಸಪ್ಪ ಆನಿಕಿವಿ

ಗೋವನಕೊಪ್ಪ

ಬೈಲಹೊಂಗಲ — ಜಿಲ್ಹಾ : ಬೆಳಗಾವಿ





...ನಂದ ಅಧ್ಯಾತ್ಮ ಪ್ರಕಾಶನ

ಹಂಗರಕಿ

ಪೋ. : ಗರಗ  ತಾ. ಮತ್ತು ಜಿ. : ಧಾರವಾಡ

ಪ್ರಥಮ ಮುದ್ರಣ : ೧೯೮೧
( ಒಂದು ಸಾವಿರ ಪ್ರತಿಗಳು )



ಬೆಲೆ : ಒಂದು ರೂಪಾಯಿ

ಮುದ್ರಕರು :
" ಮಕರಂದ ಪ್ರೆಸ್ "
ಸ್ಟೇಶನ್ ರೋಡ, ಹುಬ್ಬಳ್ಳಿ.



ಶ್ರೀ ಸದ್ಗುರು ಆತ್ಮಾನಂದ ಮಹಾಸ್ವಾಮಿಗಳವರು
ಮನಿಹಾಳ-ಸುರೇಬಾನ
ತಾಲೂಕ : ರಾಮದುರ್ಗ — ಜಿಲ್ಲಾ : ಬೆಳಗಾವಿ



ಶ್ರೀ ಸುರೇಂದ್ರ ಶಿವರಾವ ದೇಸಾಯಿ
ಧಾರವಾಡ ( ಜಮ್ಮೀಹಾಳ )



# ಆತ್ಮಸಂಶೋಧನೆ

**ವಿಷಯದೋಷದೃಷ್ಟಿ :** ೧) ಆಧುನಿಕ ಜಗತ್ತಿನಲ್ಲಿ ಭೌತಿಕವಿಜ್ಞಾನ ಶಾಸ್ತ್ರಜ್ಞರು ಅನೇಕ ಹೊಸಹೊಸ ಶೋಧಗಳನ್ನು ಮಾಡಿ ಮಾನವನ ಸುಖಸಾಧನಗಳನ್ನು ಹೆಚ್ಚುಹೆಚ್ಚಾಗಿ ಒದಗಿಸುತ್ತಿದ್ದಾರೆ. ಈ ಬಾಹ್ಯ ವಿಷಯಗಳಿಂದ ಸಿಗುವ ಸುಖವು ಅಲ್ಪ, ಕ್ಷಣಭಂಗುರ, ದುಃಖದಲ್ಲಿ ಕೊನೆಯಾಗುವದು, ಎಷ್ಟು ಭೋಗಮಾಡಿದರೂ ತೃಪ್ತಿ ಇಲ್ಲ; ಇನ್ನೂ ಬೇಕೆಂಬ ಆಸೆ ಹೆಚ್ಚುತ್ತದೆ. ಸ್ಪರ್ಧೆ, ಅಸೂಯಾ, ದ್ವೇಷ, ಬಡಿದಾಟ, ಯುದ್ಧ ಇವುಗಳಿಗೆ ಎಡೆಕೊಟ್ಟು ಮಾನವ ಸಮಾಜದ ಸುಖಶಾಂತಿಗಳನ್ನು ಹಾಳುಮಾಡಿ ಸದಾ ಚಿಂತೆಗೆ ಗುರಿಮಾಡುತ್ತದೆ. ಮೃಗಜಲದಂತೆ ನಮಗೆ ಸುಖದ ಆಸೆತೋರಿಸಿ ನಮ್ಮ ಸರ್ವನಾಶಕ್ಕೆ ಕಾರಣವಾಗುತ್ತದೆ. ಬಾಹ್ಯ ವಿಷಯಂಗಳಿಂದ ನಿತ್ಯ ಸುಖಪಡೆಯಲೆತ್ನಿಸುವದು ಅವಿವೇಕತನವೇ ಸರಿ. ಇವೆಲ್ಲ ವಿಚಾರವಂತ ಮನುಷ್ಯನ ಅನುಭವದ ಮಾತುಗಳು. ಇವನ್ನು ಸಿದ್ಧಮಾಡಿ ತೋರಿಸುವ ಅವಶ್ಯಕತೆಯೇ ಇಲ್ಲ.

**ನಾನು ಯಾರು :** ಇದು ಅತ್ಯಂತ ಮಹತ್ವದ ಪ್ರಶ್ನೆ. ಇದರಲ್ಲಿಯೇ ಮಾನವಜನ್ಮದ ಸಾರ್ಥಕತೆಯು ಅಡಗಿದೆ. ಮನುಷ್ಯನ ಎಲ್ಲ ಚಟುವಟಿಕೆ ಗಳನ್ನು ಪರೀಕ್ಷಿಸಿ ನೋಡಿದರೆ ಅವನಿಗೆ ಬೇಕಾದದ್ದು ನಿತ್ಯ ಸುಖವೆಂಬುವು ಕಂಡುಬರುವದು. ಮನುಷ್ಯನು ಸ್ವಾಭಾವಿಕವಾಗಿ ಹೊರಗೇ ನೋಡುತ್ತಿರು

ವದರಿಂದ, ಇಂದ್ರಿಯಗಳಿಗೆ ಕಾಣುವ ಸ್ತ್ರೀ, ಪುತ್ರ, ಮಿತ್ರ, ಮನೆ, ಮಾರು, ಧನ, ಧಾನ್ಯ, ಅಧಿಕಾರ, ಸಂಗೀತ, ನಾಟಕ, ಸಿನೆಮಾ ಮೊದಲಾದ ಹೊರಗೆ ಕಾಣುವ ವಿಷಯಗಳಲ್ಲಿಯೇ ರಮಮಾಣನಾಗಿ, ಅವುಗಳಿಂದ ತನಗೆ ಬೇಕಾದ ನಿತ್ಯಸುಖವು ಸಿಕ್ಕುವದೆಂದು ನಂಬಿ ಹೆಣಗಾಡುತ್ತ ಅನೇಕ ಜನ್ಮಗಳನ್ನು ಕಳೆಯುತ್ತಾನೆ. ಅವುಗಳಿಂದ ಸಿಕ್ಕುವದು ಆಯಾಸ, ದಣಿವು, ದುಃಖ ಮಾತ್ರ ಎಂದು ಕೊನೆಗೆ ವಿಚಾರದ ಫಲವಾಗಿ ಕಂಡುಕೊಳ್ಳುತ್ತಾನೆ. ಆಗ ಅವನು ನಿತ್ಯ ಸುಖದ ದಾರಿಯನ್ನು ತಿಳಿದುಕೊಳ್ಳಲು ಬಲ್ಲವರನ್ನು ಕೇಳುತ್ತಾನೆ. ಬಲ್ಲವರು "ಹೊರಗಿನಿಂದ ಸುಖ ಸಿಕ್ಕುವದಿಲ್ಲ. ಇದುವರೆಗೆ ನೀನು ತಪ್ಪು ದಾರಿಯನ್ನು ಹಿಡಿದಿದ್ದೀ. ನಿತ್ಯಸುಖವನ್ನು ಹೊರಗೆ ಹುಡುಕಬೇಡ. ನಿನ್ನೊಳಗೇ ಇದೆ. ಹೊರಗೆಂದರೆ ನೀನಲ್ಲದ ದೇಹ, ಮನ, ಜಗತ್ತು, ಒಳಗೇ ಎಂದರೆ ನೀನೇ. ಹೊರಗೆ ಸಾವು, ದುಃಖ, ಒಳಗೆ ಅಮೃತತ್ತ್ವ, ನಿತ್ಯಸುಖ, ನೀನೇ ಸಾಕ್ಷಾತ್ ನಿತ್ಯಸುಖರೂಪನಿದ್ದೀ. ನಿನ್ನನ್ನು ನೀನು ಮರೆತಿರುವಿ, ನೀನಲ್ಲದ್ದನ್ನು ನೀನೆಂದು ತಿಳಿದುಕೊಂಡು ಸಾವು ನೋವುಗಳಿಗೆ ಗುರಿಯಾಗಿ ವ್ಯರ್ಥವಾಗಿ ಒದ್ದಾಡುತ್ತಿರುವಿ. ನಿನ್ನನ್ನು ನೀನು ಕಂಡುಕೋ. ಅಂದರೆ ನಿತ್ಯಸುಖವು ಸಿಕ್ಕುಂತಾಗುವದು" ಎಂದು ಉಪದೇಶಿಸುವರು.

ಇದೊಂದು ಆಶ್ಚರ್ಯಕರವಾದ ಉಪದೇಶ. ನನ್ನನ್ನು ನಾನು ಅರಿಯೆನೇ? ಈ ದೇಹವು ನಾನಲ್ಲವೇ? ಈ ಇಂದ್ರಿಯ ಮನ ಬುದ್ಧಿಗಳು ನಾನಲ್ಲವೇ? ಈ ಜೀವವೂ ನಾನಲ್ಲವೇ? ಇವುಗಳಿಂದೊಡಗೂಡಿ ಪ್ರಪಂಚದಲ್ಲಿ ವ್ಯವಹರಿಸುತ್ತ ಸುಖ ದುಃಖಗಳನ್ನು ಅನುಭವಿಸುತ್ತ ಹುಟ್ಟುತ್ತಾ ಸಾಯುತ್ತಾ ಇರುವವನು ನಾನಲ್ಲವೇ? ನಾವೆಲ್ಲರೂ ಹೀಗೆಯೇ ತಿಳಿದುಕೊಂಡಿರುವೆವಲ್ಲ! ಎಂಥ ವಿದ್ವಾಂಸನಿರಲಿ, ಪದವೀಧರನಿರಲಿ, ಅಧಿಕಾರಸ್ಥನಿರಲಿ, ಭೌತಿಕ ಶಾಸ್ತ್ರಜ್ಞನಿರಲಿ, ರಾಜಕಾರಣಪಟು ಇರಲಿ, ರಾಷ್ಟ್ರಸೇವಕನಿರಲಿ, ಎಲ್ಲರೂ ಹೀಗೇ ತಿಳಿದುಕೊಂಡು ವ್ಯವಹರಿಸುತ್ತಿರುವೆವಲ್ಲ! ಯಾರಿಗೂ ತನ್ನ ನಿಜ ಸ್ವರೂಪವನ್ನು ಕಂಡುಕೊಳ್ಳುವ ಆವಶ್ಯಕತೆಯೇ ಕಂಡುಬಂದಿಲ್ಲವಲ್ಲ! ಇದೆಂಥ ಆಶ್ಚರ್ಯಕರವಾದ ಸಾರ್ವತ್ರಿಕ ಭ್ರಮೆ!

ಬಲ್ಲವರು ಈ ಆಶ್ಚರ್ಯಚಕಿತ ಸ್ಥಿತಿಯನ್ನು ದೂರಮಾಡುತ್ತಾರೆ. ನಿನ್ನೆದುರಿಗೆ ಕಂಡದ್ದು ನೀನಾಗಲಾರೆ. ನಿನ್ನೆದುರಿಗೆ ನೀನು ಬರುವದು ಸಾಧ್ಯವಿಲ್ಲ. ಈ ದೇಹ, ಇಂದ್ರಿಯ, ಮನ, ಬುದ್ಧಿಗಳ ಸ್ಥಿತಿಗತಿಗಳನ್ನು ನೀನು ಕಾಣಬಲ್ಲಿ, ಅರಿಯಬಲ್ಲಿ, ಅವು ನಿನಗೆ ವಿಷಯಗಳಾಗುತ್ತವೆ. ಅವುಗಳನ್ನು ಕಾಣುವ ಅರಿಯುವ ನೀನು, ಅವುಗಳಿಂದ ಬೇರೆಯಾಗಿರಬೇಕಲ್ಲವೇ? ಜೀವ ನೀನೆಂದು ಹೇಳಬಹುದು. ಆದರೆ ಜೀವನೆಂದರೆ ಏನು? ದೇಹೇಂದ್ರಿಯ ಮನ ಬುದ್ಧಿಗಳನ್ನು ಬಿಟ್ಟು ಜೀವನೆಂಬವನಾತಿಗೆ ಅರ್ಥವೇನು? ಮನಸ್ಸನ್ನು ಬಿಟ್ಟು ಜೀವನನ್ನು ಪ್ರತ್ಯೇಕವಾಗಿ ಕಂಡದ್ದುಂಟೇ? ಮನಸ್ಸಿದ್ದರೆ ಜೀವ, ಮನಸ್ಸಿಲ್ಲದಿದ್ದರೆ ಜೀವನೂ ಇಲ್ಲ. ಮನಸ್ಸಿಗೂ ಜೀವಕ್ಕೂ ಕಗ್ಗಂಟು ಬಿದ್ದಿದೆ. ಗಾಢನಿದ್ರೆಯ ಅನುಭವವೇ ಇದಕ್ಕೆ ಪ್ರಮಾಣ. ಮನಸ್ಸೇ ನೀನಲ್ಲವಾದ ಮೇಲೆ ಜೀವನೂ ನೀನಲ್ಲ. ಈ ದೇಹ ಮನಗಳು ನೀನಲ್ಲ. ಅವುಗಳ ದ್ವಾರದಿಂದ ಕಾಣುವ ವಿವಿಧ ಜಗತ್ತಂತೂ ನೀನು ಅಲ್ಲವೇ ಅಲ್ಲ. ಆದ್ದರಿಂದ ನಿನಗೆ ಕಾಣುವ ದೇಹ ಮನ ಜೀವಗಳೂ ಅವುಗಳಿಂದ ಕಾಣುವ ಜಗತ್ತೂ ನೀನಲ್ಲವೆಂದಮೇಲೆ, ನೀನಲ್ಲದ್ದನ್ನೆಲ್ಲ ಸಂಪೂರ್ಣವಾಗಿ ತೊರೆದು, ನಿನ್ನಷ್ಟಕ್ಕೆ ನೀನು ಉಳಿ. ನೀನಲ್ಲದ್ದನ್ನೆಲ್ಲ ಅಳಿದು, ನೀನು ಮಾತ್ರ ಉಳಿದು ನೋಡು ನಿನ್ನ ಅರಿವು ನಿನಗಾಗುವದು. ಇದನ್ನೇ ಶರೀಫ ಸಾಹೇಬರು ಹೀಗೆ ಹಾಡಿದ್ದಾರೆ :

ನಾ ನಾನೆಂಬುದು ನಾನಲ್ಲ । ಈ । ಮನುಷ್ಯ ಜನ್ಮವು ನಾನಲ್ಲ ॥ ಪಲ್ಲ ॥

ಮಾತಾ ಪಿತ ಸುತ ನಾನಲ್ಲ । ಭೂ । ನಾಥ ನಾಡವನು ನಾನಲ್ಲ ।
ಜಾತಿ ಗೋತ್ರಗಳು ನಾನಲ್ಲ । ಬಹು । ಪ್ರೀತಿಯ ಸತಿ ಸುತ ನಾನಲ್ಲ ॥ ೧ ॥

ನಾನಾಗಿ ನಡೆದವ ನಾನಲ್ಲ । ನಾ । ಶಿಶುನಾಳಧೀಶನ ಬಿಡಲಿಲ್ಲ ।
ನಾ ಅಳಿಯದೆ ನಾ ತಿಳಿವುಲಿಲ್ಲ । ಮತ್ತೆ । ನಾ ಎನಿಸುವ ಗುಣ ನಾನಲ್ಲ ॥ ೨ ॥

ಹೌದು. ಈ ಉಪದೇಶವೆಲ್ಲ ನಿಜ. ಇದು ನಮ್ಮ ಅನುಭವಕ್ಕೆ ಹೊಂದುಗೆಯಾಗಿದೆ. ಇವೆಲ್ಲ ಸ್ವಯಂಪ್ರಮಾಣವಾದ ಸ್ವಯಂಸಿದ್ಧವಾದ ಮಾತುಗಳು. ಎಲ್ಲರಿಗೂ ಈಗಾಗಲೇ ಇದ್ದ ಅನುಭವಗಳಿಗೆ ಹೊಂದಿಕೆಯಾಗುವ ಮಾತುಗಳಿಗೆ ಅನೇಕ ಶಾಸ್ತ್ರಗಳ ಪ್ರಮಾಣದ ಆವಶ್ಯಕತೆಯೇನು?

ಶಾಸ್ತ್ರಗಳಲ್ಲಿ ಹೇಳುವ ಆತ್ಮ. ಪರಮಾತ್ಮ, ಪರಬ್ರಹ್ಮ, ಪರಮೇಶ್ವರ, ದೇವ ಇವೆಲ್ಲವುಗಳ ಅರ್ಥ ನಿಜವಾದ ನಾನು. ನನ್ನನ್ನು ನಾನು ಅನುಭವ ಜ್ಞಾನದಿಂದ ಅರಿತುಕೊಂಡರೆ ಆತ್ಮಸಾಕ್ಷಾತ್ಕಾರವಾಯಿತು. ಆತ್ಮನೆಂದರೆ ಬೇರೆ ಅಲ್ಲ, ನಾನೇ. ಆದ್ದರಿಂದಲೇ ಜ್ಞಾನಿಗಳು ಹೀಗೆ ಹಾಡಿದ್ದಾರೆ :

ತಾ ಬೇರೆ ಆಗಬೇಕಣ್ಣ । ತನ್ನ ತಾ ತಿಳಿದು ಬೈಲ್
ಬೈಲಾದೀತಣ್ಣ ॥ ಪಲ್ಲ ॥

ನಾನೀನೆಂಬುದು ಎಲ್ಲ ಒಂದೇ । ಆಗಿ ಕೂತೀದೀ ಘನವಾಗಿ ತಂದೆ ।
ದೇಹದೊಳಗೆ ಶಂಭು ಒಂದೇ । ಬೈಲಿಗ ಬೈಲಾಗಿ
ನಿಂತಾನೋ ತಂದೆ ॥ ೧ ॥

ಜಗಕ್ಕೆಲ್ಲ ಗುರುಮೂರ್ತಿ ಒಂದೇ । ಕನ್ನಡಿ
ಮನೆಯೊಳು ಕುಳಿತವನ ಮಾರಿ ಒಂದೆ ॥

ಎರಡಂತೆ ತಿಳಿಬೇಡೋ ತಂದೇ । ತುರಳೀ ಸಂಗಮನ
ನೋಡಿ ಅವ ತಾನಾಗಿ ಹೋದೇ ॥ ೨ ॥

ಎಷ್ಟೇ ಶಬ್ದಜಾಲವನ್ನು ಬೆಳೆಸಿ ಹೇಳಿದರೂ ಹೇಳುವ ಮಾತುಗಳು ಇಷ್ಟೇ ಅಲ್ಲವೇ? ನನಗೆ ಕಾಣುವ ಈ ವ್ಯಕ್ತಿ, ಈ ವ್ಯಕ್ತಿಯಿಂದ ಕಾಣುವ ಈ ಜಗತ್ತು ನಾನಲ್ಲ. ಇದೇ ವಿಚಾರವನ್ನು ಎಲ್ಲರಿಗೂ ಇರುವ ಮತ್ತೊಂದು ದೊಡ್ಡ ನಿರ್ಣಾಯಕ ಅನುಭವದಿಂದ ನಿಶ್ಚಯಿಸಿಕೊಳ್ಳಬಹುದು. ಕನಸೆಂಬ ನನ್ನ ಅನುಭವದಲ್ಲಿ ಈ ಎಚ್ಚರದ ವ್ಯಕ್ತಿ, ಜಗತ್ತೂ ಯಾವದೂ ಇರುವದಿಲ್ಲ. ಮತ್ತೊಂದು ವ್ಯಕ್ತಿ ಮತ್ತೊಂದು ಜಗತ್ತೂ ನನಗೆ ಕಾಣುತ್ತವೆ. ಕಾಣಬಹು-ದಾದ ವ್ಯಕ್ತಿ, ಜಗತ್ತೂ ನಾನು ಆಗಲಾರೆ. ಎಚ್ಚರದಲ್ಲಿ ಸ್ವಪ್ನದ ವ್ಯಕ್ತಿ ಜಗತ್ತೂ ಕಾಣುವದಿಲ್ಲ, ಕಾಣದಾದವುಗಳು ನಾನಲ್ಲ, ನನಗೆ ತೋರಿ ಅಡ-ಗುವ ವ್ಯಕ್ತಿ, ಜಗತ್ತುಗಳು ನಾನಲ್ಲ. ಆದರೆ ನಾನು ಇರುವದು ನಿಶ್ಚಿತ. ಇವುಗಳನ್ನು ಕಾಣುತ್ತ ಇರುವವನೂ ಕಾಣದೇ ಇರುವವನೂ ನಾನೇ. ಈ ನಾನು ಯಾರು? ಹೇಗಿದ್ದೇನೆ? ನನ್ನ ಸ್ವರೂಪವೇನು? ಇದನ್ನು ನಾನು ನಾನೇ ಪ್ರಯೋಗ ಮಾಡಿ ಅನುಭವ ಜ್ಞಾನ ಹೊಂದಿ ನಿಶ್ಚಯಿಸಿಕೊಳ್ಳ-ಬೇಕು.

ಇನ್ನೊಂದು ಅದ್ಭುತವಾದ ಸಾರ್ವತ್ರಿಕ ಅನುಭವವಿದೆ. ಅದೇ ಸುಷುಪ್ತಿ ಅನುಭವವು. ಈ ಅನ ಭವವನ್ನು ಉಪನಿಷತ್ತುಗಳು ಬಹಳವಾಗಿ ಹೊಗಳುತ್ತವೆ. ಅದು ನನ್ನ ಸ್ವರೂಪವನ್ನು ನಿಶ್ಚಯವಾಗಿ ನಿರ್ಣಯಿಸಿ ಕೊಡುತ್ತದೆ. ದೇಹೇಂದ್ರಿಯ ಮನ ಬುದ್ಧಿ ಜೀವಗಳಿಲ್ಲದ ಜಗತ್ತಿನ ಸಂಬಂಧ ವಿಲ್ಲದೆ ಬರೀ ನಾನು ಹೇಗಿರುತ್ತೇನೆ? ಎಳ್ಳಷ್ಟೂ ಸುಖದುಃಖಗಳಿಲ್ಲ. ಹುಟ್ಟು ಸಾವುಗಳಿಲ್ಲ. ನೋವು ನೊಂದುಕೊಳ್ಳುವಿಕೆಯಿಲ್ಲ. ದಣಿವು ಬಾಯಾರಿಕೆಗಳಿಲ್ಲ. ಆಶೆ ಆಕಾಂಕ್ಷೆಗಳಿಲ್ಲ, ಮತ್ತೊಬ್ಬರಿಲ್ಲ. ಮತ್ತೊಂದಿಲ್ಲ. ಮತ್ತೊಂದರ ಮತ್ತೊಬ್ಬರ ಭಯವಿಲ್ಲ. ನಾನೇ ನಾನು. ಆನಂದವೇ ಆನಂದ! ನಿತ್ಯಸುಖವೇ ಸುಖ!

ಈ ನನ್ನ ಸ್ವರೂಪದ ವಿಜ್ಞಾನವನ್ನು, ಅನುಭವ ಜ್ಞಾನವನ್ನು, ಈಗ ನಾನು ಪ್ರಯೋಗ ಮಾಡಿ ಪಡೆದುಕೊಳ್ಳಬೇಕು. ಪ್ರಯೋಗ ಮಾಡುವ-ದೆಂದರೇನು? ವಿಜ್ಞಾನ ಪಡೆದುಕೊಳ್ಳುವದೆಂದರೇನು? ಏನೂ ಮಾಡುವದಲ್ಲ, ಏನನ್ನೂ ಹೊಸದಾಗಿ ಪಡೆದುಕೊಳ್ಳುವದಲ್ಲ. ನಿತ್ಯ ಸ್ವಯಂ ಸಿದ್ಧನಾದ, ಸ್ವಯಂ ಪ್ರಕಾಶನಾದ ನಾನು, ನಾನಲ್ಲದ್ದರ ಸಂಗವನ್ನು ಬಿಟ್ಟರೆ ಸಾಕು. ನಾನು ಉಳಿಯುತ್ತೇನೆ. ಅದೇ ಆತ್ಮಾನುಭವ, ಅದೇ ಆತ್ಮ ವಿಜ್ಞಾನ, ಅದೇ ಮೋಕ್ಷ, ನಾನಲ್ಲದ್ದರಿಂದ ಬಿಡುಗಡೆ,

ಗುಹೇಶ್ವರರು ಹೇಳಿದ್ದನ್ನು ಕೇಳಿರಿ :

ಸಾರಿ ಚೆಲ್ಲಿದೆ ಮುಕುತೀ । ಗುರು । ತೋರಿಸದಿದ್ದರೆ ಕಾಣಿಸದಣ್ಣ ॥ಪಲ್ಲ॥
ವೇದದ ಮೊದಲಿನ ಮೂಲವಿದು । ಮೋದಿಯೊಳು ತಾ ತುಂಬಿಹುದು ।
ಹಾದಿ ಹಾದಿಗೆ ಬಿದ್ದಿಹುದು । ಇದು । ಸಾಧಕ ಜನರಿಗೆ ಕಾಣುವದಣ್ಣ ॥ ೧ ॥
ಎತ್ತ ನೋಡಲು ಪರಬ್ರಹ್ಮವಿದು । ಸುತ್ತ ಮುತ್ತಲು ಸುಳಿಯುವದು ॥
ಮತ್ತೆ ಮತ್ತೆ ಆಗಿ ಕಾಂಬುವದು । ಗುರು । ಪುತ್ರರಿಗಲ್ಲದೆ ಕಾಣಿಸದಣ್ಣ ॥ ೨ ॥
ಹಿಂದೆ ನೋಡಲು ಬಂದಿಹುದು । ಮುಂದೆ ನೋಡಲು ನಿಂತಿಹುದು ॥
ಸಂದಿ ಸಂದಿಗೆ ಜಡಿದಿಹುದು । ಆ । ನಂದ ಗುಹೇಶ್ವರ ಲಿಂಗ ತಾನಣ್ಣ ॥ ೩ ॥

ಶಾಸ್ತ್ರಾಚಾರ್ಯರು ಉಪದೇಶಿಸುವ ಮಾತುಗಳು ಇಷ್ಟೇ ಇದಕ್ಕೂ ಹೆಚ್ಚಿನ ಮಾತು, ಶಾಸ್ತ್ರ, ಓದು ಯಾತಕ್ಕೆ ಬೇಕು ? ಹೆಚ್ಚಿನ ಸಾಧನೆಗಳಾ-

ದರೂ ಯಾಕೆ? ನಮ್ಮೆಲ್ಲರ ಸಾರ್ವತ್ರಿಕ ಅನುಭವಕ್ಕೆ ಹೊಂದುಗೆಯಾಗಿ ತರ್ಕಬದ್ಧವಾಗಿ ವಿಚಾರ ಮಾಡಿ ಆತ್ಮ ಅನಾತ್ಮಗಳನ್ನು ವಿಂಗಡಿಸಿಕೊಂಡು ಅನಾತ್ಮವಾದ ಈ ವ್ಯಕ್ತಿ ಜಗತ್ತುನ್ನು ಅಡಗಿಸಿ, ಯಾವಾಗಲೂ ಸ್ವಯಂ ಸಿದ್ಧನಾಗಿ ಸ್ವಯಂ ಪ್ರಕಾಶನಾಗಿ ಇದ್ದ ನನ್ನನ್ನು ಉಳಿಸಿಕೊಂಡು ನಿಲ್ಲಬೇಕು. ಇದೇಒಂದು ಸಾಧಿಸಬೇಕಾದ ಮಹಾ ಅನುಭವ. ಇದನ್ನು ಬಿಟ್ಟು ಓದಿದ್ದನ್ನೇ ಓದುತ್ತಾ, ಕೇಳಿದ್ದನ್ನೇ ಕೇಳುತ್ತಾ, ಹೇಳಿದ್ದನ್ನೇ ಹೇಳುತ್ತಾ ಲೇಖನ ರೂಪದಲ್ಲಿ ಬರೆಯುತ್ತ ಕವಿತ್ವ ರೂಪದಲ್ಲೆ ಹಾಡುತ್ತ ಕುಳಿತರೆ ಏನುಪ-ಯೋಗ? ಸವಿ ಸವಿ ಪಕ್ವಾನ್ನಗಳ ಬಗ್ಗೆ ಮಾತಾಡುತ್ತ ಬಾಯಿ ನೀರು ಕರೆ-ಯುತ್ತ ಕುಳಿತುಕೊಂಡರೆ ಏನುಪಯೋಗ? ಉಣಬೇಕು, ಉಪಭೋಗಿಸ ಬೇಕು, ಸುಖ ಹೊಂದಬೇಕು, ತೃಪ್ತಿ ಪಡೆಯಬೇಕು, ಆ ಆ ಅಬ್ಬ ಎಂದು ತೇಗಬೇಕು. ಅದಕ್ಕೇನು ಮಾಡಬೇಕು? ಶ್ರವಣದಿಂದ ಕೇಳಿದ್ದನ್ನು ಮನನ ದಿಂದ ತರ್ಕಬದ್ಧವಾಗಿ ಅನುಭವಕ್ಕೆ ಹೊಂದಿಸಿಕೊಂಡು ನಿಶ್ಚಯಿಸಿಕೊಂಡು ನಿಧಿಧ್ಯಾಸನದಿಂದ ನಾನಲ್ಲದ್ದನ್ನೆಲ್ಲ ಅಳಿದು ಸಾಕ್ಷಾತ್ ಪ್ರತ್ಯಕ್ಷವಾಗಿ ನಾನು-ಳಿದು ಸ್ವಯಂ ಪ್ರಕಾಶನಾದ ನನ್ನ ಅನುಭವ ಜ್ಞಾನವನ್ನು ನನ್ನಿಂದ ನಾನೇ ಹೊಂದಿ ಕೃತಾರ್ಥನಾಗಬೇಕು. "Be still and know that I am god" ಬಾಯಿಬಲ್. ಸುಮ್ಮನಿರು ಸುಮ್ಮನಿದ್ದರೆ ನಾನು ದೇವನೆಂಬುವದು ತಿಳಿಯುವದು. "ಕಶ್ಚಿದ್ಧೀರಃ ಪ್ರತ್ಯಗಾತ್ಮಾನ ಮೈಕ್ಷತ್ ಆವೃತ್ತಚಕ್ಷು, ಅಮೃತತ್ವಮಿಚ್ಛನ್" ಕಠೋಪನಿಷತ್. ಎಲ್ಲಿಯೋ ಸಾವಿರಕ್ಕೊಬ್ಬ, ಲಕ್ಷ-ಕ್ಕೊಬ್ಬ ಬುದ್ಧಿವಂತನು ಸಾವುನೋವಿಲ್ಲದ ಸ್ಥಿತಿಯನ್ನು ಅಪೇಕ್ಷಿಸಿ ಹೊರಗೆ ತಾನಲ್ಲದ್ದರಲ್ಲಿ ಹರಿದಾಡುವ ಮನಸ್ಸನ್ನು ಹಿಂಜಗ್ಗಿ ಸುಮ್ಮನೆ ನಿಲ್ಲಿಸಿ ಅಳಿಸಿ, ಅಳಿದು, ತನ್ನನ್ನು ಮಾತ್ರ ಉಳಿಸಿಕೊಂಡು ಅರಿಯುತ್ತಾನೆ.

"ಆತ್ಮಾನ ಮೇಕಂ ವಿಜಾನೀಥ । ಅನ್ಯಾಂ ವಾಚಂ ವಿಮುಂಚಥ ॥
ನಾನುಧ್ಯಾಯಾತ್ ಬಹೂನ್ ಶಬ್ದಾನ್ ।
ವಾಚೋ ವಿಗ್ಲಾಪನಂ ಹಿ ತತ್" ॥

—ಉಪನಿಷತ್ತು.

ಆತ್ಮನೊಬ್ಬನ ವಿಜ್ಞಾನ ಮಾಡಿಕೋ. ಉಳಿದ ಮಾತುಗಳನ್ನು ನಿಲ್ಲಿಸು,

ಬಹಳ ಶಬ್ದಗಳ ವಾಗ್ಜಾಲವನ್ನು ಅಧ್ಯಯನ ಮಾಡಬೇಡ. ಯಾಕೆಂದರೆ ಅದು ವ್ಯರ್ಥ ಬಾಯಿ ನೋವು.

ಸುಮ್ಮನಿರು ಮನವೇ ಸುಮ್ಮನಿರು ಮನವೇ ।
ಸಾಕ್ಷಾತ್ ಮನವೇ ಸುಮ್ಮನಿರು ॥ ಪಲ್ಲ ॥

ಸುಮ್ಮನಿದ್ದರೆ ನೀನು ಬ್ರಹ್ಮನಾಗುವೆ ।
ಸುಮ್ಮನಿದ್ದೇನೆಂಬ ಹಮ್ಮನಳಿದು ॥ ಅನುಪಲ್ಲ ॥

ಪರರ ನಿಂದಿಸಬೇಡ ಪರವಸ್ತು ಹಿಡಿಯಬೇಡ ।
ಪರತರಾನಂದವನು ಬಿಡಲುಬೇಡ ॥

ಪರರು ಎನ್ನುವರೆಂದು ಭೇದಮಾಡಲು ಬೇಡ ।
ಪರಕೇ ಪರತರವಾದ ಪರವಸ್ತು ನೀನು ॥ ೧ ॥

ಶಾಂತಗುರುವಿನಹೊಂದಿ ಶಾಂತಗಣದೊಳಗಾಡಿ ।
ಶಾಂತನಾಗಿದ್ದರೆ ಶಾಂತಿ ಅಹುದು ॥

ಶಾಂತನಿರುಪಾಧಿಯೊಳು ಶಾಂತಿಯಲಿ ಮನಮುಳಗಿ ।
ಶಾಂತನಾಗಿ ಸರ್ವಾಂತರ್ಯಾಮಿಯಾಗಿ ॥ ೨ ॥

ನಾನು ನಿತ್ಯ ಸ್ವಯಂಸಿದ್ಧನಾಗಿದ್ದೂ ಸ್ವಯಂಪ್ರಕಾಶನಾಗಿದ್ದೂ ನನ್ನ ಅನುಭವ ಜ್ಞಾನವಾಗಲಿಕ್ಕೆ ಏನು ಆತಂಕ? ಏನು ಅಡ್ಡಿ ಮಾಡಿದೆ? ನಾನಲ್ಲದ್ದನ್ನು ತಿಳಿಗೇಡಿತನದಿಂದ ನಾನೆಂದು ಅಪ್ಪಿಕೊಂಡಿದ್ದೇ ಆತಂಕ ಆದ್ದರಿಂದ ನಾನಲ್ಲದ್ದರ ತಾಯಿಬೇರೆಂದರೆ ಈ ಮನಸ್ಸು. ಈ ಮನಸ್ಸೇ. ಈ ಸುಳ್ಳು ನಾನು. ನನ್ನದೆಂಬುದರ ತಾಯಿಬೇರು. ಈ ಮನಸ್ಸಿದ್ದರೆ ಈ ಪ್ರಪಂಚ. ಮನಸ್ಸಿಲ್ಲದಿದ್ದರೆ ಪ್ರಪಂಚವಿಲ್ಲ. ಶೋಕ ಮೋಹಗಳಿಲ್ಲ, ಸಾವು ನೋವುಗಳಿಲ್ಲ, ಗಾಢ ಸುಷುಪ್ತಿಯ ಅನುಭವವೇ ಇದಕ್ಕೆ ನಿದರ್ಶನ. ಆದ್ದರಿಂದ ಈ ಮನಸ್ಸನ್ನು ಕೊಲ್ಲಬೇಕು. ಕೊಂದರೆ ಪ್ರಪಂಚವೂ ಶೋಕ ಮೋಹಗಳೂ ಸಾವು ದುಃಖಗಳೂ ಬೇರುಸಹಿತವಾಗಿ ಕೊಚ್ಚಿಕೊಂಡು ಹೋಗುವವು. ಈ ಮನಸ್ಸನ್ನು ಕೊಲ್ಲುವದೆಂತು? ಯಾತರಿಂದ? ಅಸಂಗ ಶಸ್ತ್ರದಿಂದ ಎಂದು ಭಗವದ್ಗೀತಾ ತಾಯಿ ಹೇಳುತ್ತಾಳೆ. ನಾವಾಗಿ ಹುಚ್ಚುತನದಿಂದ ತಂದುಕೊಂಡ ಸಂಗವನ್ನು ವಿಚಾರದಿಂದ ನಾವಾಗಿ ಹರಿದುಕೊಳ್ಳುವದೇ ಅದನ್ನು ಕೊಲ್ಲುವ ಉಪಾಯ. ಮನಸ್ಸು ಜಡ. ತಾನಾಗಿ ಏನನ್ನೂ

ಮಾಡಲಾರದು. ನಾವಾಗಿ ಆದರ ಸಂಗಮಾಡಿ ಆದಕ್ಕೆ ಜೀವಕಳೆಯನ್ನು ತುಂಬುತ್ತೇವೆ. ನಾನೇ ಆಡಿಸದಿರಲು ಅದು ಜಡ ಒನಕೆಯ ಬೊಂಬೆ, ಏನು ಮಾಡಲುಬಲ್ಲದು? ತಾನೇ ಬೇರೆ. ನನ್ನ ಸಂಗದಿಂದ ಮನಸ್ಸಿಗೆ ಆಯುಷ್ಯ ಜೀವದಾನ. ಅದನ್ನುಬಿಟ್ಟು ನಾನು ಹಿಂದೆಸರಿದರೆ ಅದು ತಾನೇ ಉಸಿರುಗಟ್ಟಿ ಸಾಯುವದು. 'ಮಾಡಿದ್ದುಣ್ಣೊ ಮಹಾರಾಯ' ಎಂಬ ನಾಣ್ನುಡಿಯಂತೆ ನಮ್ಮ ಗತಿಯಾಗಿದೆ. ನಾವಾಗಿ ಮನಸ್ಸನ್ನೆಬ್ಬಿಸಿ ಆದರ ಸಂಗಮಾಡಿ ಪ್ರಪಂಚ ವ್ಯವಹಾರವನ್ನು ಹುಟ್ಟಿಸಿ ಮೋಹ ಶೋಕ ಸಾವು ನೋವುಗಳಿಗೆ ಗುರಿಯಾಗಿ ವ್ಯಥೆಪಡುತ್ತಿದ್ದೇವೆ. ತಾನು ಕುರಿಯೆಂದು ತಿಳಿದುಕೊಂಡಿದ್ದ ಸಿಂಹದ ಮರಿಯಂತೆ ಬ್ಯಾ ಬ್ಯಾ ಅನ್ನುತ್ತ ಹುಲ್ಲು ಮೇಯುತ್ತಿದ್ದೇವೆ. ನಾನು ಜೀವಕುರಿಯಲ್ಲ. ಆತ್ಮ ಸಿಂಹನೆಂದು ಗರ್ಜನೆ ಮಾಡಿದರೆ ನಾನಲ್ಲದ ಕಲ್ಪಿತ ಜೀವ ಕುರಿಯು ಹೇಳಹೆಸರಿಲ್ಲದೆ ಹಾರಿಹೋಗುವದು. ಆನಂದವೇ ಆನಂದ !

ಪೇಳಲಳವೇ ಸ್ವಾನುಭವದ ಸುಖವ ಮಾನಿನೀ ।
ಭಾನುಕೋಟಿಪ್ರಭೆಗೆ ಮಿಗಿಲು ಕಂಡೆ ಕಾಮಿನೀ ॥ ಪಲ್ಲ ॥
ನಾದದೊಳು ಸೂಸುನಾದ ಎದ್ದು ಧಿಮ್ಮಿತೇ ।
ಬೋಧದಿಂದ ಬ್ರಹ್ಮದೊಳಗೆ ಐಕ್ಯವಾದಿತೇ ॥
ಸೌಖ್ಯವುಂಡು ಸುಖಕೆ ಮೆಚ್ಚಿ ಮೈಯ ಮರೆದಿತೇ ।
ಆದಿ ಅನಾದಿಯಾಗಿ ತಾನೇ ನಿಂತಿತೇ ॥ ೧ ॥
ಉಣದೆ ಉಡದೆ ಉದರ ತುಂಬಿ ಉಕ್ಕಲೇರಿತೇ ।
ಉಕ್ಕಲೇರಿ ಇಂದ್ರಿಯಗಳ ಉರುಲು ಅಡಗಿತೇ ॥
ಉಲುವು ಅಡಗಿ ಸೂಸುಗಾಳಿ ಸುಮ್ಮನೇ ನಿಂತಿತೇ ।
ಒಳಗೆ ಹೊರಗೆ ಒಂದೆಯಾಗಿ ಕಲ್ಪ ಬೆಳಗಿತೇ ॥ ೨ ॥

ವಸ್ತುಕಂಡೆ ಒಂದು । ಶ್ರೀ । ಸದ್ಗುರುವಿನ ದಯದಿಂದ ॥ ಪಲ್ಲ ॥
ತೇಜಃ ಪುಂಜರೂಪ । ಮೂ । ಜಗದೊಳಗಿದು ಅಪರೂಪ ॥
ನಿಜನಿರ್ವಿಕಲ್ಪ । ಸಜ್ಜನ । ಹೃದಯದ ಚಿದ್ಘನರೂಪ ॥ ೧ ॥
ರೂಪಕೆ ನೆಲೆಯಿಲ್ಲ । ವ್ಯಾಪಕ । ವಾಯಿತು ಮೂಜಗವೆಲ್ಲ ॥
ಗುಪ್ತ ಜ್ಞಾನಿಬಲ್ಲ । ಜಪತಪ । ಗಳಿಗಿದು ಸಿಲುಕುವದಲ್ಲ ॥ ೨ ॥
ಬೈಲಿಗೆ ನಿರ್ಬೈಲ ।ಭಾವಿಕ। ಬಲ್ಲ ಇದರ ಹೊಯಿಲ ಜ್ಞಾನಿಯು॥
ಮಹೀಪತಿಗನುಕೂಲ । ಜೀವನ್ । ಮುಕ್ತಿಗೆ ಮೂಲ ॥ ೩ ॥

**ಮಾನವನ ಗುರಿಗೆ ದಾರಿ:** ಮನುಷ್ಯನ ಎಲ್ಲ ಚಟುವಟಿಕೆಗಳನ್ನು ಚೆನ್ನಾಗಿ ಪರೀಕ್ಷಿಸಿ ನೋಡಿದರೆ, ಅವುಗಳ ಹಿಂದೆ ಒಂದೇ ಉದ್ದೇಶವು, ಒಂದೇ ಗುರಿಯು ಇದ್ದದ್ದು ಕಂಡು ಬರುತ್ತದೆ. ಅದೆಂದರೆ ನಿತ್ಯ ಸುಖ, ಅಮೃತತ್ವ ಬಾಹ್ಯ ವಿಷಯಗಳಿಂದ ನಿತ್ಯ ಸುಖವು ದೊರೆಯುವದಿಲ್ಲೆಂದು ಕಂಡುಕೊಂಡ ಮೇಲೆ ಅದಕ್ಕೆ ದಾರಿ ಎಲ್ಲಿ? ಈ ದಾರಿಯನ್ನು ಶೋಧ ಮಾಡಿದವರು ನಮ್ಮ ಆರ್ಯಋಷಿಗಳು. ಅವರು ಬಾಹ್ಯ ವಿಷಯಗಳಲ್ಲಿ ನಿತ್ಯ ಸುಖವನ್ನು ಕಾಣುವ ಆಶೆಯನ್ನೇ ಬಿಟ್ಟು, ಅದಕ್ಕೆ ತೀರ ವಿರುದ್ಧವಾದ ಒಳದಾರಿಯಿಂದ ಹೋಗಿ ಮಾನವನು ತನ್ನ ನಿಜ ಸ್ವರೂಪವಾದ ಆತ್ಮನ ಅನ್ವೇಷಣ ಮಾಡಿ ಸಂಶೋಧನ ಮಾಡಿಕೊಂಡರೆ ನಿತ್ಯಸುಖವೆಂಬ ಅಮೃತತ್ವವು ದೊರೆಯುವದೆಂಬುದನ್ನು ಪ್ರಯೋಗ ಮಾಡಿ ನೋಡಿ ಅನುಭವ ಪಡೆದುಕೊಂಡು ರೇ ರೇ ಅಮೃತಶ್ಯ ಪುತ್ರಃ ಅಮೃತ ಪುತ್ರರೇ ಎಂದು ನಮಗೆಲ್ಲ ಕೂಗಿ ಕೂಗಿ ಹೇಳಿದರು. ಈ ಪ್ರಯೋಗವನ್ನು ಪ್ರತಿಯೊಬ್ಬನೂ ತನ್ನ ಹೃದಯಾಂತರಾಳವೆಂಬ ಪ್ರಯೋಗ ಶಾಲೆಯಲ್ಲಿ ಪ್ರಯೋಗ ಮಾಡಿ ಅನುಭವಿಸಿ ನೋಡಬೇಕು.

ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ ।
ಯಸ್ಮಿನ್ಸ್ಥಿತೋ ನ ದುಃಖೇನ ಗುರುಣಾಽಪಿ ವಿಚಾಲ್ಯತೇ ॥

ಎಂಬ ಗೀತಾ ವಾಕ್ಯಗಳು ಉಪದೇಶಿಸುವಂತೆ ಈ ಅಂತರಾತ್ಮನ ಲಾಭಕ್ಕಿಂತ ಹೆಚ್ಚಿನ ಲಾಭವಿಲ್ಲ. ಮಾನವನು ಹೊರಗಿನ ವಿಷಯಗಳ ಹಂಗಿಲ್ಲದೆ ತನ್ನ ಆತ್ಮಸ್ವರೂಪದಲ್ಲಿಯೇ ಸದಾನಂದವನ್ನು ಹೊಂದಬಲ್ಲನು. ಹೊರಗಿನಿಂದ ಎಂಥ ದೊಡ್ಡ ದುಃಖವು ಬಂದರೂ ತನ್ನ ನಿತ್ಯಾನಂದ ಸ್ಥಿತಿಗೆ ಯಾವ ಚ್ಯುತಿಯೇ ಇಲ್ಲ. ಜಗತ್ತನ್ನೆಲ್ಲ ಗೆದ್ದರೂ ತನ್ನ ಸ್ವರೂಪವನ್ನೇ ತಾನು ಗೆದಿಯದಿದ್ದರೆ ಮಾನವನಿಗೆ ದುಃಖ ತಪ್ಪಿದ್ದಲ್ಲ. ಈ ನಿತ್ಯಾನಂದರೂಪ ಪರಮಾತ್ಮನ ಶೋಧಕ್ಕಾಗಿ ವಿಚಾರವಂತರೆಲ್ಲರೂ ಅವಶ್ಯವಾಗಿ ಮುಂದರಿಯುಬೇಕು. ಇದೊಂದು ದೊಡ್ಡ ಅನುಭವಶಾಸ್ತ್ರ. ಇತ್ತಂಡವಾದಕ್ಕೆ, ಕುತರ್ಕಕ್ಕೆ ಅದರಂತೆ ಅಂಧಶ್ರದ್ಧೆಗೆ ಇಲ್ಲಿ ಎಷ್ಟು ಅವಕಾಶವಿಲ್ಲ. ಪ್ರತಿಯೊಬ್ಬನೂ ಪ್ರಯೋಗ ಮಾಡಿ ಅನುಭವಪಡೆದು ನಿಶ್ಚಯ ಮಾಡಿಕೊಳ್ಳಬಹುದು.

**ಒಂದೇ ವಾಕ್ಯ :** ಈ ಆತ್ಮ ಸಂಶೋಧನೆಯ ಒಳದಾರಿಯನ್ನು ತುಳಿದು ಸ್ವಾನುಭವದಿಂದ ಒಂದು ಹೆದ್ದಾರಿಯನ್ನೇ ಏರ್ಪಡಿಸಿದಂಥ ನಮ್ಮ ಪುರಾತನ ಆರ್ಯ ಮಹರ್ಷಿಗಳು ಉಪನಿಷತ್ತೆಂಬ ವೇದಾಂತ ಶಾಸ್ತ್ರದಲ್ಲಿ ಸ್ವಾನುಭವದಿಂದ ಮಾಡಿದ ಉಪದೇಶಗಳು ನಿತ್ಯಾನಂದವೆಂಬ ನಮ್ಮ ಅಂತಿಮ ಧ್ಯೇಯದೆಡೆಗೆ ನಮ್ಮನ್ನು ಕರೆದೊಯ್ಯಲು ಮಾರ್ಗದರ್ಶಿಗಳಾಗಿವೆ. ಅವುಗಳ ಸಾರ ಸಂಗ್ರಹವನ್ನು ಛಾಂದೋಗ್ಯೋಪನಿಷತ್ತು ಒಂದೇ ವಾಕ್ಯದಲ್ಲಿ ಹೀಗೆ ಹೇಳಿದೆ: ಸ ಯ ಏಷೋಽಣಿಮಾ ಐತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ। "೧) ಒಂದಾನೊಂದು ಪರಮ ಸೂಕ್ಷ್ಮವಾದ ತತ್ತ್ವವಿರುವದು, ೨) ಅದೇ ಜೀವ ಜಡರೂಪದ ಜಗತ್ತೆಲ್ಲಕ್ಕೂ ಆತ್ಮನು, ಎಂದರೆ ನಿಜವಾದ ಸ್ವರೂಪವು, ೩) ಅದೇ ಸತ್ಯ, ಎಂದರೆ ಅದೊಂದೇ ನಿತ್ಯ, ನಿರ್ವಿಕಾರೀ ಅವಿನಾಶೀ ತತ್ತ್ವವು. ಅದನ್ನು ಬಿಟ್ಟು ಉಳಿದ ಜಗತ್ತು ಅಸತ್ಯ, ಮಿಥ್ಯಾ, ಎಂದರೆ ಅನಿತ್ಯ, ಅಸುಖ, ವಿಕಾರೀ, ವಿನಾಶೀ. ೪) ಅದೇ ಆತ್ಮನು ಎಂದರೆ ನಾವೆಲ್ಲರೂ 'ನಾನು, ನಾನು' ಎಂದು ಕರೆದುಕೊಳ್ಳುತ್ತಿರುವ ನಮ್ಮೊಳಗಿನ ಸ್ವರೂಪವು. ೫) ಅದೇ ನೀನಿದ್ದೀ, ಶ್ವೇತಕೇತೋ" ಎಂದು ಮಗನಾದ ಶ್ವೇತಕೇತುವಿಗೆ ತಂದೆಯಾದ ಉದ್ದಾಲಕ ಋಷಿಯು ಒಂದೇ ವಾಕ್ಯದಲ್ಲಿ ಹೇಳಿದ ಉಪದೇಶವು ಅಧಿಕಾರಿಗಳೆಲ್ಲರಿಗೂ ಈಗಲೇ ಇಲ್ಲಿಯೇ ಅನುಭವಕ್ಕೆ ಬರುವ ತತ್ತ್ವವನ್ನೊಳಗೊಂಡಿರುತ್ತವೆ.

**ಈ ಕಾಲದಲ್ಲಿಯೂ ಸಾಧ್ಯ:** ಈಗಿನ ಕಾಲದಲ್ಲಿ ಅಲ್ಪವೀರ್ಯರಾದ ನಮಗೆ ಅದು ದೊರಕೀತೋ ಇಲ್ಲವೋ ಎಂದು ಸಂಶಯಪಡುವದಕ್ಕೆ ಕಾರಣವಿಲ್ಲ "ತದಿದಮಪ್ಯೇತರ್ಹಿ ಯಂ ಏವಂ ವೇದ ಅಹಂ ಬ್ರಹ್ಮಾಸ್ಮೀತಿ ಸ ಇದಂ ಸರ್ವ ಭವತಿ। ತಸ್ಯ ಹ ನ ದೇವಾಶ್ಚ ನಾ ಭೂತ್ಯಾ ಈಶತೇ॥" ಎಂಬ ಬೃಹದಾರಣ್ಯಕ ಉಪನಿಷತ್ತಿನ ಅನುಭವ ಪ್ರಮಾಣ ವಾಕ್ಯದಂತೆ.

"ಹಿಂದೆ ವಾಮದೇವಾದಿ ಋಷಿಗಳು ಅರಿತುಕೊಂಡಂತೆ ಈಗಲೂ ಯಾವನು "ನಾನು ಬ್ರಹ್ಮನಿರುತ್ತೇನೆ" ಎಂದು ಅರಿತುಕೊಳ್ಳುತ್ತಾನೋ

 

ಅವನು ಇದೆಲ್ಲವೂ ಆಗಿಬಿಡುತ್ತಾನೆ. ಈ ಸರ್ವಾತ್ಮ ಭಾವವು ಅವನಿಗೆ ಬಾರದಂತೆ ಮಾಡುವದು ದೇವತೆಗಳಿಗೂ ಶಕ್ಯವಿಲ್ಲ" ಈ ಧೀರರ ಮಾತನ್ನು ನಾವು ಲಕ್ಷಿಸಬೇಕು.

**ಮೋಕ್ಷ, ಯೋಗ, ಅಜ್ಞಾನ :** ಅನೇಕ ಜೀವ ಜಡಗಳಿಂದ ಕೂಡಿದ ಈ ನಾನಾವಿಧವಾದ ಪ್ರಪಂಚವು ಸತ್ಯವಲ್ಲ ಎಂದರೆ ನಿತ್ಯ, ನಿರ್ವಿಕಾರೀ, ಅವಿನಾಶೀ ತತ್ತ್ವವಲ್ಲ; ಅದ್ದರಿಂದಲೇ ಅದು ಮಿಥ್ಯ, ವ್ಯರ್ಥ, ನಿಷ್ಪ್ರಯೋಜಕ, ಅನಿತ್ಯ, ಅಸುಖ ಎಂದರೆ ಸಾವು ದುಃಖ ನಾಶಗಳಿಂದ ಕೂಡಿರುತ್ತದೆ. ಎಲ್ಲ ಮಾನವರ ನಿಜವಾದ ಗುರಿಯು ಸರ್ವದುಃಖನಾಶ, ನಿತ್ಯಾನಂದ ಪ್ರಾಪ್ತಿ, ಅಮೃತತ್ವ ಇವೇ. ಇವು ಆ ಸರ್ವಾಂತರ್ಯಾಮಿಯೂ ಸರ್ವವ್ಯಾಪಿಯೂ ಸರ್ವಭೂತಾಂತರಾತ್ಮನೂ ಒಬ್ಬನೇ ಒಬ್ಬನಾದ, ಮತ್ತೊಬ್ಬನಿಲ್ಲದ ಏಕದೇವನ ಲಕ್ಷಣಗಳು. ಈ ಏಕಮೇವಾದ್ವಿತೀಯ, ಸಚ್ಚಿದಾನಂದ, ಪರಮಾತ್ಮ, ಪರಬ್ರಹ್ಮನು ಪ್ರತಿಯೊಬ್ಬನ ಹೃದಯದಲ್ಲಿದ್ದು ಪ್ರತಿಯೊಬ್ಬನ ಆತ್ಮನು, ನಿಜಸ್ವರೂಪನು ಆಗಿರುತ್ತಾನೆ. ಮೋಕ್ಷವೆಂದರೆ ಬಿಡುಗಡೆ; ಸರ್ವದುಃಖ, ಸಾವು, ನಾಶ ಇವುಗಳಿಂದ ಅತ್ಯಂತಿಕವಾದ ಬಿಡುಗಡೆ; ಎಂದರೆ ಈ ಮೋಕ್ಷಲಕ್ಷಣಗಳಿಂದ ಕೂಡಿದ ತನ್ನ ನಿಜಸ್ವರೂಪವಾದ ಪ್ರತ್ಯಗಾತ್ಮನ ಜ್ಞಾನವನ್ನು ಮಾಡಿಕೊಂಡು ಅದರೊಂದಿಗೆ ಅದು ತಾನೆಂದು ಕೂಡಿಕೊಳ್ಳುವದು. ಇದಕ್ಕೆ ಯೋಗವೆನ್ನುತ್ತಾರೆ. "ತಂ ವಿದ್ಯಾದ್ದುಃಖ ಸಂಯೋಗ ವಿಯೋಗ ಯೋಗಸಂಜ್ಞಿತಂ" ಎಂದು ಭಗವದ್ಗೀತಾಮಾತೆಯು ಹೇಳುವದು. ಇದೇ ಯೋಗವನ್ನು, ನಾನು ಜೀವನು, ಕರ್ತಾ, ಭೋಕ್ತಾ, ಸುಖೀ, ದುಃಖೀ, ಸಂಸಾರೀ ಎಂದು ತಿಳಿದುಕೊಳ್ಳುವದು, ಅಜ್ಞಾನದಿಂದುಂಟಾದ ವಿಪರೀತ ಜ್ಞಾನವು, ಇದೇ ಸರ್ವಾನರ್ಥಕ್ಕೂ ಮೂಲ.

**ವಿಚಾರಬದ್ಧ ಪ್ರಮಾಣ :** "ನಾನು ದೇಹಮನಗಳಲ್ಲ, ಜೀವನಲ್ಲ, ಶುದ್ಧ ಪರಮಾತ್ಮನು" ಎಂಬ ಜ್ಞಾನವು ಆಗಲಿಕ್ಕೆ ಶೃತಿವಾಕ್ಯಗಳಷ್ಟೇ ಪ್ರಮಾಣವೋ? ಆ ಋಷಿವಾಕ್ಯಗಳನ್ನಷ್ಟೇ ನಂಬಿಕೊಂಡು ನಾವು ಸಾಗಬೇಕೋ? ಅಥವಾ ವಿಚಾರವಂತರಿಗೆ ಒಗ್ಗುವಂತೆ ಮತ್ತೆ ಯಾವದಾದರೂ ಸಾರ್ವತ್ರಿಕಾನುಭವದ ಪ್ರಮಾಣಗಳಿವೆಯೋ? ಎಂಬ ಪ್ರಶ್ನೆಯು ಉದ್ಭವಿ

ಸುತ್ತದೆ. ವಿಜ್ಞಾನ ಯುಗವಾದ, ಅನುಭವವನ್ನು ಅವಲಂಬಿಸಿರುವ, ತರ್ಕಬದ್ಧವಾದ ವಿಚಾರಸರಣಿಗೆ ಮಹತ್ವವನ್ನು ಕೊಡುವ ಈಗಿನ ಕಾಲದಲ್ಲಿ ಕೇವಲ ಉಪನಿಷತ್ತಿನ ಆಪ್ತವಾಕ್ಯಗಳಿಗೆ ನಿರ್ಣಾಯಕ ಪ್ರಮಾಣತ್ವವು ಬರಲಾರವು. ವಾಕ್ಯಪ್ರಮಾಣಗಳನ್ನೇ ಅವಲಂಬಿಸಿಕೊಂಡು ಕೂತರೆ ಬೇರೆ ಬೇರೆ ಆಚಾರ್ಯರೂ ಪಂಡಿತರೂ ಆ ವಾಕ್ಯಗಳಿಗೆ ಬೇರೆ ಬೇರೆ ಅರ್ಥವನ್ನು ಹಚ್ಚಿ ತಮತಮಗೆ ಇಷ್ಟವಾದ ಸಿದ್ಧಾಂತಗಳನ್ನು ಏರ್ಪಡಿಸಿಕೊಂಡರೆ ಅಜ್ಞ ಜನಸಮೂಹವು ಗೊಂದಲದಲ್ಲಿ ಬೀಳಲಿಕ್ಕೆ ಅನುವುಂಟಾಗುವದು. ಇಂಥ ದುಃಸ್ಥಿತಿಯು ಈಗ ಸಾಕಷ್ಟು ಉಂಟಾಗಿದೆ,

**ಶ್ರುತ್ಯನುಗ್ರಹೀತ ತರ್ಕ :** ಆದರೆ ಔಪನಿಷದ ಋಷಿಗಳು ಈ ವಿಚಾರ ಪ್ರಿಯರನ್ನು ಬಹುವಾಗಿ ಪ್ರೀತಿಸುತ್ತಾರೆ. ಸಾರ್ವತ್ರಿಕಾನುಭವಕ್ಕೆ ಅನು ಸಾರಿಯಾದ ತರ್ಕಬದ್ಧವಿಚಾರಸರಣಿ ಎಂಬ ಒರೆಗಲ್ಲಿಗೆ ಹಚ್ಚಿ ತಿಕ್ಕಿ ನೋಡಿ ಒಪ್ಪಿಗೆಯಾಗಿ, ಯೋಗ್ಯಮನನಕ್ರಿಯೆಯಿಂದ ನಿಸ್ಸಂಶಯವಾದ ಶಾಸ್ತ್ರೀಯ ವಾದ ಆತ್ಮಜ್ಞಾನವಾದಮೇಲೆ, ಈ ಶಾಸ್ತ್ರ ಜ್ಞಾನಕ್ಕನುಸರಿಸಿ ನಿಧಿಧ್ಯಾಸನ ಮಾಡಿ ಆತ್ಮಾನುಭವವೆಂಬ ವಿಜ್ಞಾನವನ್ನು ಮಾಡಿಕೊಂಡರೆ ಮಾನವನು ಕೃತಕೃತ್ಯನೂ ತೃಪ್ತನೂ ಆಗಲಿಕ್ಕೆ ಅನುಕೂಲವಾಗುವಂತೆ ಶ್ರುತ್ಯನುಗ್ರ-ಹೀತವಾದ ತರ್ಕಪದ್ಧತಿಯನ್ನು ಆ ಋಷಿಗಳು ದಯಪಾಲಿದ್ದಾರೆ. ಅದನ್ನು ನಿರೀಕ್ಷಿಸುವದು ಅವಶ್ಯ.

**ಸ್ವಯಂಸಿದ್ಧ ತತ್ತ್ವಗಳು :** ಈ ಶ್ರುತಿತರ್ಕಪದ್ಧತಿಯನ್ನು ತಿಳಿದು ಕೊಳ್ಳುವದಕ್ಕಿಂತ ಮೊದಲು, ಕೆಲವು ಸ್ವಯಂಸಿದ್ಧವಾದ, ಸರ್ವಸಮ್ಮತ ವಾದ, ಅನ್ಯಪ್ರಮಾಣದಿಂದ ಸಿದ್ಧಮಾಡುವ ಅವಶ್ಯಕತೆಯಿಲ್ಲದ, ಕೆಲವು ತತ್ತ್ವಗಳನ್ನು ನಾವು ಗ್ರಹಿಸಿಕೊಳ್ಳಬೇಕು. ೧) ನಾನು ನಿಜವಾಗಿಯೂ ಇದ್ದೇನೆ. ನನ್ನ ಅಸ್ತಿತ್ವದ ವಿಷಯಕ್ಕೆ ನನಗೆ ಎಳ್ಳಷ್ಟೂ ಸಂಶಯವಿಲ್ಲ. ೨) ನಾನು ಚೈತನ್ಯಸ್ವರೂಪನು, ಜ್ಞಾನಸ್ವರೂಪನು, ಜಡವಸ್ತುವಲ್ಲ, ೩) ನನಗೆ ದೃಶ್ಯವಾದದ್ದು ನನಗೆ ಜಡ. ನಾನು ದ್ರಷ್ಟಾ ಇದ್ದುದರಿಂದ ನನಗೆ ದೃಶ್ಯವಾದದ್ದು ನಾನಾಗಲಾರೆನು. ನನ್ನನ್ನು ನಾನೇ ಎದುರಿಟ್ಟು ನೋಡುವದು ಶಕ್ಯವಿಲ್ಲ. ೪) ಅದರಂತೆ ನನ್ನಿಂದ ಅಗಲಿ ದೂರವಾಗುವದು

ನಾನಾಗಲಾರೆನು. ನನ್ನ ಸ್ವರೂಪವು ನನ್ನನ್ನು ಬಿಟ್ಟು ಎಂದೂ ತೋರಗ ಲಾರದು. ಹಾಗೆ ತೋರಿದ್ದು ಎಂದೂ ನನ್ನ ಸ್ವರೂಪವಾಗಲಾರದು. ಚಿರಸ್ಥಾಯಿಯಾಗಿ ಎಂದೆಂದಿಗೂ ನನ್ನನ್ನು ಅಂಟಿಕೊಂಡಿದ್ದೇ ನನ್ನ ಸ್ವರೂಪವಾಗಬಲ್ಲದು. ಈ ನಾಲ್ಕು ಸ್ವಯಂಸಿದ್ಧವಾದ ತತ್ತ್ವಗಳಿಗೆ ಅಂಟಿಕೊಂಡೇ ನಾವು ವಿಚಾರ ಮಾಡಬೇಕಾಗುತ್ತದೆ.

**ಲೌಕಿಕ ತರ್ಕ ಪದ್ಧತಿ :** ಈಗ ಎಲ್ಲೆಲ್ಲಿಯೂ ಪ್ರಚಾರದಲ್ಲಿದ್ದ ಲೌಕಿಕ ತರ್ಕಪದ್ಧತಿಯು ಏಕದೇಶೀಯವಾಗಿದೆ, ಅಪೂರ್ಣವಾಗಿದೆ, ದೋಷ ಯುಕ್ತವಾಗಿದೆ, ಅದು ಕೇವಲ ಒಂದು ಎಚ್ಚರದ ಅವಸ್ಥೆಯ ಅನುಭವವನ್ನು ಮಾತ್ರ ಲೆಕ್ಕಕ್ಕೆ ತೆಗೆದುಕೊಂಡಿದೆ, ವ್ಯಕ್ತಿ ಜೀವನ ದೃಷ್ಟಿಯಿಂದಾಗುವ ಇಂದ್ರಿಯಾನುಭವ, ಮನಸಾನುಭವವೆಂಬ ಪ್ರತ್ಯಕ್ಷಪ್ರಮಾಣ, ಅದನ್ನೇ ಅವಲಂಬಿಸಿದ ಅನುಮಾನ ಪ್ರಮಾಣ ಮತ್ತು ಶಬ್ದ ಪ್ರಮಾಣ ಈ ಮೂರು ಪ್ರಮಾಣಗಳನ್ನಷ್ಟೇ ಆಧಾರವಾಗಿಟ್ಟುಕೊಂಡು ನಡೆದಿದೆ. ಹೀಗೆ ಇದು ಎಚ್ಚರದವಸ್ಥೆಯ ವ್ಯಕ್ತಿಜೀವನದ ಅನುಭವದ ಅಭಿಮಾನವನ್ನು ವಹಿಸಿ ಅದರ ಪಕ್ಷಪಾತವನ್ನು ಹಿಡಿದು ವಿಚಾರ ಮಾಡಿದ್ದರಿಂದ ತಪ್ಪು ತಪ್ಪಾದಂಥ, ಪರಸ್ಪರ ವಿರುದ್ಧವಾದಂಥ ಸಿದ್ಧಾಂತಗಳಿಗೆ ಎಡೆಗೊಟ್ಟಿದೆ. ಉಳಿದೆರಡು ದೊಡ್ಡ ಅನುಭವಗಳನ್ನು ಎಂದರೆ ಸ್ವಪ್ನ ಸುಷುಪ್ತಿಗಳನ್ನು ಸರಿಯಾಗಿ ಗಣನೆಗೆ ತೆಗೆದುಕೊಂಡಿಲ್ಲ. ತೆಗೆದುಕೊಂಡಿದ್ದರೂ ಎಚ್ಚರದ ಅಭಿಮಾನವುಳ್ಳ ಪಕ್ಷಪಾತ ದೃಷ್ಟಿಯಿಂದಲೇ ಅವನ್ನು ಅವಲೋಕಿಸಿದೆ. ಸ್ವಂತ ಅನುಭವದ ದೃಷ್ಟಿಯಿಂದಲೇ ಆ ಅನುಭವಗಳನ್ನು ವಿಚಾರಕ್ಕೆ ತೆಗೆದುಕೊಂಡಿಲ್ಲವೆಂಬು ದನ್ನು ನಾವು ಲಕ್ಷಿಸಬೇಕು.

**ಪಾಶ್ಚಿಮಾತ್ಯ ವಿಚಾರ ಪದ್ಧತಿ :** ಈ ದೋಷಪೂರ್ಣವಾದ ಲೌಕಿಕ ತರ್ಕವನ್ನೇ ಪಾಶ್ಚಿಮಾತ್ಯ ತತ್ತ್ವಜ್ಞಾನಿಗಳೂ, ಪೌರ್ವಾತ್ಯ ತತ್ತ್ವಜ್ಞಾನಿಗಳನೇ ಕರೂ, ಹಿಂದಿನ ಆಚಾರ್ಯರನೇಕರೂ, ವಿದ್ವಾಂಸರೂ, ಶಾಸ್ತ್ರಿಗಳೂ, ಪಂಡಿ ತರೂ, ಮಠದ ಸ್ವಾಮಿಗಳನೇಕರೂ ಆಧಾರವಾಗಿಟ್ಟುಕೊಂಡು ದೋಷ ಯುಕ್ತ ಸಿದ್ಧಾಂತಗಳನ್ನೂ ವಿಚಾರಪದ್ಧತಿಯನ್ನೂ ಲೋಕದಲ್ಲಿ ಹರಡಿದ್ದ ರಿಂದ ವಿಚಾರ ಕೋಲಾಹಲಕ್ಕೆ ವಾಗ್ಯುದ್ಧಕ್ಕೆ ಇಂಬುಂಟಾಗಿದೆ.

**ವೈದಿಕ ತರ್ಕವು :** ವೈದಿಕ ತರ್ಕಪದ್ಧತಿಯು ಹೀಗಲ್ಲ. ಅದು ಸರ್ವ ವಿಚಾರ ಪ್ರಿಯರಿಗೂ ಸಮ್ಮತವಾಗಿದೆ. ಅದು ಮೇಲೆ ಕಾಣಿಸಿದ ನಾಲ್ಕು ಸ್ವಯಂಸಿದ್ಧವಾದ ತತ್ವಗಳಿಗೆ ಅಂಟಿಕೊಂಡು, ಎಚ್ಚರ, ಕನಸು, ಗಾಢನಿದ್ರೆ ಎಂಬ ಮೂರರೂ ಸಾರ್ವತ್ರಿಕ ಅನುಭವಗಳನ್ನು ಸಾಕ್ಷಾತ್ ಸ್ವಯಂ ಅನುಭವದ ದೃಷ್ಟಿಯಿಂದಲೇ ವಿಚಾರ ಮಾಡಿ ವಿಚಾರ ಬದ್ಧ ತರ್ಕದಿಂದ ಆತ್ಮಾನಾತ್ಮ ವಿವೇಕವನ್ನು ಮಾಡಿ ಆತ್ಮತತ್ತ್ವದ, ತನ್ನ ನಿಜ ಸ್ವರೂಪದ ಅನ್ವೇಷಣವನ್ನು ಮಾಡಿಕೊಡುತ್ತದೆ. ಇಲ್ಲಿ ಏಕದೇಶೀಯವಾದ, ಕೇವಲ ಎಚ್ಚರದ ಅಭಿಮಾನ ಪಕ್ಷಪಾತಗಳಿಂದ ಕೂಡಿದ ದೋಷದೃಷ್ಟಿಗೆ ಅವಕಾಶವಿಲ್ಲ. ಇಲ್ಲಿ ವ್ಯಷ್ಟಿ ದೃಷ್ಟಿ ಹಾರಿಹೋಗಿ ಸಮದೃಷ್ಟಿಯು ಪ್ರಾಪ್ತವಾಗುತ್ತದೆ. ಇಲ್ಲಿ ಇಡೀ ಎಚ್ಚರದ ಪ್ರಪಂಚವನ್ನೂ ಸ್ವಪ್ನದ ಪ್ರಪಂಚವನ್ನೂ ಸುಷುಪ್ತಿಯ ಅನುಭವವನ್ನೂ ಒಂದೊಂದೇ ಮುದ್ದೆಯ ದೃಶ್ಯವಾಗಿಟ್ಟುಕೊಂಡು ಆ ಮೂರರೂ ದೃಶ್ಯಾನುಭವಗಳಿಗೆ ಏಕಮೇವ ದೃಷ್ಟಾರನಾದ, ಸ್ವಯಂಸಿದ್ಧನಾದ ಸಾಕ್ಷಿಚೈತನ್ಯನಾದ, ತನ್ನ ನಿಜ ಸ್ವರೂಪವಾದ ಆತ್ಮನು, ಅವು ತೋರಿದಾಗ ನೋಡುತ್ತಾ ಅಡಗಿದಾಗ ತಾನೆ ತಾನಾಗಿ ಉಳಿಯುತ್ತ, ಮೂರೂ ಅನುಭವಗಳಲ್ಲಿಯೂ ಕೂಟಸ್ಥ; ಅಕ್ಷರ, ನಿತ್ಯಸಿದ್ಧನಾಗಿ ತುರೀಯನಾಗಿ ಅನ್ವಯಿಸಿ-ಕೊಂಡು ಉಳಿದು ಹೊಳೆಯುತ್ತಾನೆ. ಇಲ್ಲಿ ದೃಶ್ಯಗಳ ಕಡೆಗೆ ಲಕ್ಷ್ಯ ಹಾಕದೆ, ದೃಷ್ಟಾರನಾದ ಆತ್ಮನನ್ನು ಕಂಡುಹಿಡಿಯುವದೇ ಮುಖ್ಯ ಉದ್ದೇಶ. ಈ ಶುದ್ಧ ಸಾಕ್ಷೀ ಅನುಭವವೆಂಬುದು ಎಲ್ಲರಿಗೂ ಈಗಲೇ ಇಲ್ಲಿಯೇ ಇದ್ದರೂ ಶ್ರುತಿಯ ಈ ತರ್ಕಬದ್ಧವಾದ ವಿಚಾರಸರಣಿಗೆ ಶರಣು ಹೋಗದಿದ್ದರೆ ಯಾರಿಗೂ ಗೋಚರಿಸುವದಿಲ್ಲ. " ೧. ಸ್ವಪ್ನಾಂತಂ ಜಾಗರಿತಾಂತಂ ಚೊ ಭೌಯನಾನು ಪಶ್ಯತಿ ॥ ಮಹಾಂತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ ॥ ೨. ಯತ್ರ ಸುಪ್ತೋ ನ ಕಂಚನ ಕಾಮಂ ಕಾಮಯತೆ । ನ ಕಂಚನ ಸ್ವಪ್ನಂ ಪಶ್ಯತಿ ತತ್ ಸುಷುಪ್ತಂ ॥ ೩. ತದಾ ಸತಾ ಸಂಪನ್ನೋ ಭವತಿ ॥ " ಎಂಬ ಮುಂತಾದ ಉಪನಿಷದ್ವಾಕ್ಯಗಳು ತೋರಿಸಿದ ಮಾರ್ಗವನ್ನು ಅನುಸರಿಸಿ ಸಾರ್ವತ್ರಿಕ ಪೂರ್ಣ ಅನುಭವಗಳ ಸ್ವಂತ ಅನುಭವದ ದೃಷ್ಟಿಯಿಂದ ವಿಚಾರ ಮಂಥನ ಮಾಡಿ ನೋಡಲಾಗಿ ಕೆಲವು ಅನುಭವ ಸಿದ್ಧಾಂತಗಳು ಹೊರಬೀಳುವವು.

**ಅನುಭವ ಸಿದ್ಧಾಂತಗಳು :** (೧) ಸ್ವಪ್ನಜಾಗರಗಳೆಡೂ ಸರಿಸಮ-ವಾಗಿ ಏನೂ ಭೇದವಿಲ್ಲ (೨) ಸುಷುಪ್ತಿ ಎಂದರೆ ಆತ್ಮಸ್ವರೂಪವೇ, ಬ್ರಹ್ಮ ಸ್ವರೂಪವೇ. (೩) ಒಂದು ಅವಸ್ಥೆ ದೃಶ್ಯವಿರುವಾಗ ಮತ್ತೊಂದಿರುವದಿಲ್ಲ. (೪) ಮೂರು ಅವಸ್ಥಾನುಭವಗಳನ್ನು ಅನುಭವಿಸುವ ನಾನು ಮೂರರ-ಲ್ಲಿಯೂ ಹಾಸುಹೊಕ್ಕಾಗಿರುತ್ತೇನೆ; ಮೂರರಲ್ಲಿಯೂ ಸಮಾನನು. 'ಸ್ವಪ್ನದ ಅಂತವನ್ನೂ ಜಾಗರದ ಅಂತವನ್ನೂ ಎರಡನ್ನೂ ಯಾತರಿಂದ ನೋಡು-ತ್ತೇನೋ ಆ ವಿಭು ವಿಶ್ವವ್ಯಾಪಕ ಮಹಾ ಆತ್ಮನನ್ನು ಮನನದಿಂದ ತಿಳಿದ ಧೀರನು ಶೋಕದಿಂದ ಪಾರಾಗುತ್ತಾನೆ'. ಎಂಬ ಉಪನಿಷದ್ವಾಕ್ಯವು ಈ ಮಾತನ್ನೇ ಎತ್ತಿ ತೋರಿಸುತ್ತದೆ. ಈ ಅವಸ್ಥೆಗಳು ಒಂದೊಂದೇ ತೋರಿ ಅಡಗುವದನ್ನು ನೋಡುತ್ತಾ ಸ್ಥಾಣು, ಅಚಲ ಕೂಟಸ್ಥನಾಗಿ ಕುಳಿತಿರುವ ಆತ್ಮನು ಇಂಥ ದೃಶ್ಯ ಅವಸ್ಥೆಗಳಲ್ಲಿ ಅನ್ವಯಿಸಿಕೊಂಡಿರುವ ಸನಾತನ ಪುರುಷ. ಈ ಆತ್ಮನೇ ಸರ್ವಸಾಕ್ಷಿ ಈ ಅನುಭವಾನುಸಾರಿಯಾದ ವಿಚಾರ ಸರಣಿಯಿಂದ ನಿಷ್ಪನ್ನವಾಗುವ ಇನ್ನೊಂದು ಮಹಾ ಸಿದ್ಧಾಂತವೇನೆಂದರೆ ಸುಷುಪ್ತಿಯ ಅನುಭವದೃಷ್ಟಿಯಿಂದ ಆತ್ಮನೊಬ್ಬನೇ ಸತ್ಯವಾಗಿರುವನು; ಅವನಹೊರ್ತು ಮತ್ತೊಂದಿಲ್ಲ ಈ ಅವಸ್ಥಾದೃಶ್ಯಗಳು ಹೊರಬೀಳುವದು ಅವನಿಂದಲೇ; ನಿಲ್ಲುವದೂ ಅವನಲ್ಲಿಯೇ; ಅಡಗುವದೂ ಅವನಲ್ಲಿಯೇ. ಈ ದೃಶ್ಯಗಳು ಅವನಿಗೆ ಅಂಟಿಕೊಳ್ಳುವದಿಲ್ಲ.

**ಅವಸ್ಥೆಗಳೆಂದರೇನು ? :** ಈ ಸ್ವಂತ ಅನುಭವದ ದೃಷ್ಟಿಯಿಂದ ನೋಡಿದರೆ ಆತ್ಮನು ನಿತ್ಯ ಶುದ್ಧ ಬುಧ ಮುಕ್ತಸ್ವಭಾವದವನಾದಿಯೋ ವಿಕಾರರಹಿತನಾಗಿ ಇದ್ದಕ್ಕಿದ್ದಂತೆಯೇ ಉಳಿದು ತನ್ನ ಅಗಾಧ ಮಾಯಾ ಶಕ್ತಿಯಿಂದ ಈ ದೃಶ್ಯಗಳಾಗಿ ತೋರಿಕೊಳ್ಳುತ್ತಾನೆ ಆದ್ದರಿಂದ ಮೂರೂ ಅವಸ್ಥೆಗಳೆಂದರೆ ಆತನು ತೋರಿಕೊಳ್ಳುವ ಬಗೆ; ತಿಳಿದಂತೆ ವ್ಯಕ್ತಿಯ ಮನಸ್ಸಿನ ಸ್ಥಿತ್ಯಂತರಗಳಲ್ಲ. ಹೀಗೆ ಸ್ವಾನುಭವದ ಶುದ್ಧದಾರಿಯನ್ನೇ ಹಿಡಿದು ಮೆಲುಕು ಹಾಕಿ ಪರ್ಯಾಲೋಚಿಸಿ ಭ್ರಾಂತಿ ಮೂಲಕವಾದ ತಪ್ಪುಕಲ್ಪನೆ-ಗಳನ್ನೆಲ್ಲ ಹೊಡೆದೋಡಿಸಿ ಶುದ್ಧ ಆತ್ಮಜ್ಞಾನವನ್ನು ಸಂಪಾದಿಸಿಕೊಂಡು ಧನ್ಯರಾಗುವದು ಎಲ್ಲ ವಿಚಾರವಂತರ ಕರ್ತವ್ಯ ಈ ಶುದ್ಧವಿಚಾರಸರಣಿಯು "ಸ ಯ ಏಷ ಸಂಪ್ರಸಾದೋ ಅಸ್ಮಾತ್ ಶರೀರಾ ತ್ಸಮುತ್ಥಾಯ ಪರಂ ಜ್ಯೋತಿ-

ರೂಪಸಂಪದ್ಯ ಸ್ವೇನರೂಪೇಣ ಅಭಿನಿಷ್ಪದ್ಯತೆ ಸೋಽಯಮಾತ್ಮಾ ॥ " ಎಂಬ ಉಪನಿಷದುಕ್ತಿಗೆ ಅನುಸರಿಸಿ, ಈ ದೇಹ ಬುದ್ಧಿ, ಜೀವ ಬುದ್ಧಿಯಿಂದ ನಮ್ಮನ್ನು ಕಿತ್ತೊಯ್ದು ಪರಂಜ್ಯೋತಿರೂಪವಾದ ನಮ್ಮ ನಿಜಸ್ವರೂಪದಲ್ಲಿ ನಿಲ್ಲಿಸುತ್ತದೆ ಈ ಸರ್ವಾನುಭವ ಸಮ್ಮತವಾದ ತರ್ಕಬದ್ಧವಾದ ವಿಚಾರಸರಣಿಯನ್ನೂ ಆದರಿಂದ ನಿಷ್ಪನ್ನವಾಗುವ ಬ್ರಹ್ಮಾತ್ಮೈಕ್ಯ ಜ್ಞಾನವನ್ನೂ ಶುದ್ಧದೃಷ್ಟಿಯ ನಿಷ್ಪಕ್ಷಪಾತರಾದ ಧೀರ ವಿಚಾರವಂತರೆಲ್ಲರೂ ಒಪ್ಪಲೇಬೇಕಾಗುವುದು.

**ಜ್ಞಾನ, ವಿಜ್ಞಾನ, ನಿದಿಧ್ಯಾಸನ :** ಈ ಶುದ್ಧತರ್ಕದ ಸಹಾಯದಿಂದ ಮನನ ಮಾಡಿಕೊಂಡು " ಆತ್ಮಾ ವಾ ಅರೆ ಅನ್ವೇಷ್ಟವ್ಯಃ ॥ " ಎಂಬ ಶ್ರುತ್ಯುಕ್ತಿಯಂತೆ ಶಾಸ್ತ್ರಜ್ಞಾನ ರೂಪದ ಆತ್ಮಜ್ಞಾನವನ್ನು ಮಾಡಿಕೊಂಡರೆ ಆಗಲಿಲ್ಲ. " ವಿಜಿಜ್ಞಾಸಿತವ್ಯಃ ॥ " ಎಂಬ ಮುಂದಿನ ಮಹತ್ವದ ಸಾಧನವು ಉಳಿಯಿತು. ಅನುಭವಾತ್ಮಕ ವಿಜ್ಞಾನವನ್ನು ಸಂಪಾದಿಸಿಕೊಳ್ಳಬೇಕು. ಅದಕ್ಕೇ ಸ್ವಾನುಭವ ಸ್ವರೂಪಾವಗತಿ, ಫಲರೂಪೀ ಜ್ಞಾನ ಎನ್ನುತ್ತಾರೆ. ಜ್ಞಾನ ವಿಜ್ಞಾನಗಳೆರಡೂ ಕೂಡಿ ತೃಪ್ತಿಗೆ, ಪೂರ್ಣತೆಗೆ ಕಾರಣಗಳು. ಈ ಸಾಧನೆಯೇ ನಿದಿಧ್ಯಾಸನವು. ಶಾಸ್ತ್ರಜ್ಞಾನದಿಂದ ಶುದ್ಧ ಆತ್ಮಜ್ಞಾನವು ಉದಯಿಸುತ್ತದೆ; ಆತ್ಮಭಾವವುಂಟಾಗುತ್ತದೆ ಇದನ್ನನುಸರಿಸಿದ ನಿದಿಧ್ಯಾಸನ ರೂಪದ ಆತ್ಮ ಚಿಂತನದಿಂದ ಆತ್ಮಾನುಭವವೆಂಬ ವಿಜ್ಞಾನವನ್ನು ಪಡೆದುಕೊಳ್ಳಬೇಕು. "ಆತ್ಮಾನಂ ಚೆ ದ್ವಿಜಾನೀಯಾತ್ ಅಯಮಸ್ಮೀತಿ ಪುರುಷಃ ॥ ಕಿಮಿಚ್ಛನ್ಕಸ್ಯ ಕಾಮಾಯ ಶರೀರಮನುಸಂಜ್ವರೇತ ॥ " ಎಂಬ ಉಪನಿಷದುಕ್ತಿಯು ಸರ್ವಾನುಭವ ಸಮ್ಮತವಾದ ಪ್ರಮಾಣವು. ಈ ಪರಮಾತ್ಮನ ವಿಜ್ಞಾನವನ್ನು "ಇವನು ನಾನು ಇರುತ್ತೇನೆ" ಎಂದು ಸ್ವಾನುಭವಾತ್ಮಕ ವಿಜ್ಞಾನವನ್ನು ಸಿದ್ಧಿಮಾಡಿಕೊಂಡವನು ಯಾರ ಕಾಮುಕ್ಕಾದಿ ಯಾವ ಕಾಮುಕ್ಕಾಗಿ ಶರೀರವನ್ನು ದುಡಿಸುವನು? ಎಂದು ಈ ವಾಕ್ಯದ ಅಭಿಪ್ರಾಯ. ಈ ಆತ್ಮಾನುಭವವು ವಿಷಯಾಸಕ್ತಿಯನ್ನೂ, ದೇಹಾಭಿಮಾನವನ್ನೂ ಪೂರಾ ನಾಶ ಮಾಡುತ್ತದೆ. ಜೀವ ಬುದ್ಧಿಯನ್ನು ಕೊಚ್ಚಿ ಹಾಕಿ ಆತ್ಮ ಬುದ್ಧಿಯನ್ನು ದೃಢಪಡಿಸುತ್ತದೆ

**ಶುದ್ಧ, ಸೂಕ್ಷ್ಮ, ಅಗ್ರ್ಯ ಬುದ್ಧಿಯೇ ವಿಜ್ಞಾನಕ್ಕೆ ಕಾರಣ :** ಈ ವಿಜ್ಞಾನ ಅಥವಾ ಆತ್ಮಾನುಭವವನ್ನು ಪಡೆಯಲಿಕ್ಕೆ ಶುದ್ಧ, ಸೂಕ್ಷ್ಮ, ಅಗ್ರ್ಯ

ಬುದ್ಧಿಯೇ ಕರಣವು. 'ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ॥' ಎಂಬ ಅನುಭವ ಸಮ್ಮತವಾದ ಉಪನಿಷದ್ವಾಕ್ಯವು ಇದಕ್ಕೆ ಪ್ರಮಾಣವು. ಯಾವದಾದರೂ ವಸ್ತುವಿನ ಜ್ಞಾನವಾಗಬೇಕಾದರೆ ಬುದ್ಧಿಯು ಆ ವಸ್ತುವಿನಂತೆ ಆಗಬೇಕಾಗುತ್ತದೆ. ಈ ಸರ್ವ ಸಾಮಾನ್ಯ ನಿಯಮದಂತೆ ಬುದ್ಧಿಯು ಆತ್ಮ ವಿಜ್ಞಾನವನ್ನು ಮಾಡಿಕೊಳ್ಳಲಿಕ್ಕೆ ನಿದಿಧ್ಯಾಸನದಿಂದ ಆತ್ಮನಂತೆ ನಿರ್ಮಲವೂ, ಸ್ವಚ್ಛವೂ, ಸೂಕ್ಷ್ಮವೂ, ಅನಾದ್ಯನಂತವೂ, ಏಕಮೇವಾದ್ವಿತೀಯವೂ ಆದಾಗ ಪುರಂದರದಾಸರು ಹೇಳಿದಂತೆ ಬುದ್ಧಿಯು ಆತ್ಮನಲ್ಲಿ ಬೆರೆತು ಬಿಟ್ಟಾಗ, ಪರಮಾತ್ಮನ ಯಥಾರ್ಥ ಸಾಕ್ಷಾತ್ ಸ್ವಾನುಭವ ವಿಜ್ಞಾನವಾಗುತ್ತದೆ. ಇಲ್ಲಿ ಸಾಕಾರ, ನಿರಾಕಾರ, ಸಗುಣ, ನಿರ್ಗುಣ ಎಂಬ ಮಾತುಗಳಿಗೆ ಬೆಲೆಯಿಲ್ಲ. ಕಲ್ಪನೆಗೆ ಅವಕಾಶವಿಲ್ಲ. ವಸ್ತುವಿದ್ದಂತೆ ಜ್ಞಾನವಾಗುತ್ತದೆ. ಆದ್ದರಿಂದಲೇ ಈ ಜ್ಞಾನ ವಿಜ್ಞಾನಗಳು ವಸ್ತು ತಂತ್ರವಾದವುಗಳು, ಹೆಚ್ಚು ಕಡಿಮೆ ಮಾಡಲು ಬರುವಂಥವಲ್ಲ. ಮತಭೇದಕ್ಕೆ ಆಸ್ಪದ ಕೊಡುವಂಥವುಗಳಲ್ಲ. ಈ ಅನುಭವವು ಹೇಳಲಿಕ್ಕೆ ಬಾರದಿದ್ದರೂ ಅನುಭವಗಮ್ಯವಾಗಿದೆ. ಯಾರು ಬೇಕಾದವರು ಶ್ರವಣ, ಮನನ, ನಿದಿಧ್ಯಾಸನವೆಂಬ ವಿಚಾರಕ್ರಮದಿಂದ ಪ್ರಯೋಗ ಮಾಡಿ ಈ ಆತ್ಮಾನುಭವವನ್ನು ಈಗಲೇ ಇಲ್ಲಿಯೇ ಪಡೆದುಕೊಳ್ಳಬಹುದು. ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ । ತತ್ರಕೇನ ಕಂ ವಿಜಾನಿಯಾತ್ ॥ ಎಂಬ ಶ್ರುತ್ಯುಕ್ತಿಯಂತೆ ಆ ವಿಜ್ಞಾನಾವಸ್ಥೆಯಲ್ಲಿ ಎಲ್ಲವೂ ಆತ್ಮನೊಂದೇ. ಇಲ್ಲಿ ಯಾರು ಯಾರನ್ನು ಯಾತರಿಂದ ನೋಡುವರು. ವಿಜ್ಞಾನ ಮಾಡಿಕೊಳ್ಳುವರು?

**ಪ್ರಪಂಚ ಮಾಯಿಕ :** ಅನೇಕ ಜೀವಜಡಗಳಿಂದ ಕೂಡಿದ ಈ ಚಿತ್ರ ವಿಚಿತ್ರವಾದ, ಅನೇಕ ವ್ಯವಹಾರಗಳಿಂದ ಕೂಡಿದ ಜಗತ್ತು ಆ ಪರಮಾತ್ಮನ ಪ್ರಕೃತಿ ಅಥವಾ ಅಚಿಂತ್ಯಮಾಯಾಶಕ್ತಿಯ ಪರಿಣಾಮವಾಗಿದೆ. ಅವನಿಂದಲೇ ಹುಟ್ಟಿ, ಅವನಲ್ಲಿಯೇ ಅವನ ಆಧಾರದಿಂದಲೇ ನಿಂತುಕೊಂಡಿದೆ. ಅವನನ್ನು ಬಿಟ್ಟು ಇದು ಸ್ವತಂತ್ರವಾದ ಅಸ್ತಿತ್ವವುಳ್ಳದ್ದಲ್ಲ. ಇದು ಹುಸಿಯಾದ ತೋರಿಕೆಯು. ಹೀಗೆಂದು ಅನುಭವ ಜ್ಞಾನವು ನಿದಿಧ್ಯಾಸನದ ಫಲವಾಗಿ ಆತ್ಮಸ್ವರೂಪದಲ್ಲಿ ನೆಲೆನಿಂತು ನೋಡಿದಾಗ ಗೋಚರವಾಗುವದು. ಇದಕ್ಕೆ ಸ್ವಾನುಭವವೇ ಪ್ರಮಾಣವು.

**ಆತ್ಮನು ನಿತ್ಯ ಸಿದ್ಧ ವಸ್ತು :** ಈ ವಿಚಾರಮಾರ್ಗದಲ್ಲಿ ವಿಶೇಷವಾಗಿ ಲಕ್ಷಿಸತಕ್ಕ ಇನ್ನೊಂದು ಮಾತಿದೆ. ನನ್ನ ನಿಜಸ್ವರೂಪವಾದ ಆತ್ಮನು ನಿತ್ಯ ಸಿದ್ಧವಾದ ವಸ್ತು. ಸಾಧನದಿಂದ ಅಥವಾ ಕರ್ಮದಿಂದ ಅದನ್ನು ಸಿದ್ಧಪಡಿಸಿಕೊಳ್ಳಬೇಕಾಗಿಲ್ಲ, ವೇದಾಂತ ಶಾಸ್ತ್ರವು ಹೊಸದಾಗಿ ಏನನ್ನೂ ಮಾಡಲಿಕ್ಕೆ ಹೇಳುವದಿಲ್ಲ ಶಾಶ್ವತವಾಗಿ ಇದ್ದದ್ದರ ಜ್ಞಾನವನ್ನು ಮಾತ್ರ ಮಾಡಿಕೊಡುತ್ತದೆ. ಕರ್ಮದಿಂದ ಅಥವಾ ಸಾಧನದಿಂದ ಸಿದ್ಧಮಾಡಿಕೊಂಡದ್ದು ಮತ್ತೆ ನಾಶವಾಗಬಹುದು. ನಾನು ಅಂದರೆ ನನ್ನ ನಿಜ ಸ್ವರೂಪವಾದ ಆತ್ಮನು ನಿತ್ಯ ಸಿದ್ಧ. ನಾನು ಎಂದಾದರೂ ಇದ್ದಿದ್ದಿಲ್ಲವೆಂಬ ಮಾತೇ ಸುಳ್ಳು. ಆದ್ದರಿಂದಲೇ ಜ್ಞಾಪಕಂ ತು ಶಾಸ್ತ್ರಮ್ ನ ತು ಕಾರಕಮ । ಶಾಸ್ತ್ರವು ಇದ್ದದ್ದನ್ನು ತಿಳಿಸಿಕೊಡುತ್ತದೆ. ಏನನ್ನೂ ಮಾಡಲಿಕ್ಕೆ ಹೇಳುವದಿಲ್ಲ ಆತ್ಮಜ್ಞಾನ ವಿಜ್ಞಾನಗಳೇ ನಮ್ಮ ಗುರಿ. ನಾನು ಈಗ ಜೀವನಿದ್ದು ಸಾಧನದಿಂದ ಆತ್ಮನಾಗಬೇಕೆಂಬುದು ಹಾಸ್ಯಾಸ್ಪದ ಮಾತು. ಎಂದಿಗೂ ಜೀವನು ಜೀವನೇ ಆತ್ಮನು ಆತ್ಮನೇ. ಆತ್ಮನಲ್ಲಿ ತೋರುವ ದೃಶ್ಯರಾಶಿಯಲ್ಲಿ ಒಂದಾದ ಜೀವನನ್ನು ನಾನೆಂದು ಭ್ರಮೆಯಿಂದ ತಪ್ಪುತಿಳಿವಳಿಕೆಯಿಂದ ಗ್ರಹಿಸಿದ್ದನ್ನು ವಿಚಾರ ಮಂಥನದಿಂದ ತಳ್ಳಿ ಹಾಕಿ ಆತ್ಮಾನಾತ್ಮ ವಿವೇಕದಿಂದ ಅನಾತ್ಮವನ್ನೆಲ್ಲ ಆತ್ಮನಲ್ಲಿಯೇ ಅಡಗಿಸಿಕೊಂಡು ಕೇವಲ ಆತ್ಮನಾಗಿಯೇ ಉಳಿಯುವದು ವಿಜ್ಞಾನವು. ವಿಜ್ಞಾನದ ಫಲವಾಗಿ "ಸರ್ವ ಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ। ಈಕ್ಷತೆ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ ॥" ಎಂಬ ಗೀತೋಕ್ತಿಯಂತೆ ಎಲ್ಲೆಲ್ಲಿಯೂ ಸಮಬ್ರಹ್ಮವನ್ನು ಕಾಣುವ ಆತ್ಮಯೋಗಿಯು ಎಲ್ಲ ಭೂತಗಳಲ್ಲಿ ಆತ್ಮನನ್ನು ಆತ್ಮನಲ್ಲಿ ಎಲ್ಲ ಭೂತಗಳನ್ನೂ ಕಾಣುತ್ತಾನೆ. ಇಲ್ಲಿ ಜೀವ ಬುದ್ಧಿಯಿಂದ ತ್ರಿಕರಣಗಳಿಂದ ಮಾಡುವ ಸಾಧನಗಳ ಜಂಜಾಟವಿಲ್ಲ.

**ಮೌನವೇ ಸಾಧನ :** ಜೀವದ ಸಾಧನದ್ವಾರಗಳನ್ನೂ ಜೀವನನ್ನೂ ಸಹ ಪೂರಾ ಮುಚ್ಚಿ ಬಿಡುವದೇ ನಿಜವಾದ ಸಾಧನ. ಮೂಗು ಹಿಚಿಕಿ ಹಿಡಿದರೆ ಬಾಯಿ ತಾನೇ ತೆರೆಯುವದೆಂಬಂತೆ ಜೀವ ಮನಕ್ಕೆ ಕೀಲಿ ಹಾಕಿ ಬಿಟ್ಟರೆ, ಇದ್ದ ಪರಮಾತ್ಮನು ತಾನೇ ಉದಯಿಸಿಕೊಳ್ಳುವನು. ಸ್ವಯಂ ಪ್ರಕಾಶನಾಗಿ ಹೊಳೆಯುವನು. "ಅತ್ಯಂತ ಪ್ರಶಾಂತನಾಗು, ಮೌನಹೊಂದು

ಅಂದರೆ ನೀನೇ ದೇವರೆಂಬ ಜ್ಞಾನವು ಹೊಳೆಯುವದು" ಎಂಬ ಅನುಭವದ ಮಾತನ್ನೇ ಒತ್ತಿ ಹೇಳುತ್ತದೆ. ಬೌದ್ಧರು ಹೇಳುವದೂ ಇದೇ ಸತ್ಯಜ್ಞಾನ ಮಾರ್ಗವನ್ನು. ಈ ಆತ್ಮಜ್ಞಾನ ಮಾರ್ಗವು ಪಾಶ್ಚಿಮಾತ್ಯ ದೇಶಗಳಲ್ಲಿಯೂ ಸಾಕ್ರೆಟಿಸ್, ಪ್ಲೇಟೋನ ಕಾಲದಿಂದಲೂ ಪ್ರಸಿದ್ಧವಾಗಿದೆ. ಇಸ್ಲಾಮು ಧರ್ಮವಲ್ಲಿಯೂ ಸೂಫೀ ಪಂಥದವರೂ ಈ ಅನುಭವಾತ್ಮಕ ಆತ್ಮ ವಿಚಾರ ಮಾರ್ಗವನ್ನೇ ಪುರಸ್ಕರಿಸುತ್ತಾರೆ ಪ್ರತಿಯೊಬ್ಬನೂ ತನ್ನನ್ನು ಅಂದರ ತನ್ನ ನಿಜಸ್ವರೂಪವನ್ನು ತಿಳಿದುಕೊಳ್ಳಲಿಕ್ಕೆ ಹಕ್ಕುಳ್ಳವನಾಗಿದ್ದಾನೆ "ಇದು ಪ್ರತ್ಯಕ್ಷಾವಗಮ್ಯ, ಅವ್ಯಯ, ಧರ್ಮ ಮಾಡಲಿಕ್ಕೆ ಸುಸುಖವಾದದ್ದು," ಎಂದು ಗೀತೆಯು ಹೇಳುತ್ತದೆ ಅನಾತ್ಮವನ್ನೆಲ್ಲ ಆತ್ಮಸ್ವರೂಪದಲ್ಲಿ ಆತ್ಮ ಭಾವದಿಂದ ಅಡಗಿಸಿಕೊಂಡು ಶುದ್ಧಾತ್ಮನಾಗಿ ಉಳಿಯುವದೇ ಸಾಧನದ ಮರ್ಮ.

**ಅಧ್ಯಾತ್ಮ ವಿಜ್ಞಾನ ಶಾಸ್ತ್ರ:** ಭೌತಿಕ ವಿಜ್ಞಾನ ಶಾಸ್ತ್ರಗಳಂತೆ ಅಧ್ಯಾತ್ಮವಿಜ್ಞಾನವೂ ಒಂದು ವಿಜ್ಞಾನಶಾಸ್ತ್ರ. ಇಲ್ಲಿಯೂ ಪ್ರಯೋಗ ಮಾಡಿ ಸಿದ್ಧಾಂತದ ಅನುಭವವನ್ನು ಪಡೆದುಕೊಳ್ಳಬೇಕು. ಆತ್ಮತತ್ತ್ವ ವಿಚಾರಪದ್ಧತಿಯೂ ಅದರಿಂದ ಹೊರಡುವ ಸಿದ್ಧಾಂತಗಳೂ ಸಾರ್ವತ್ರಿಕ ಅನುಭವ ಆಧಾರದ ಮೇಲೆ ನಿಂತಿರುವದರಿಂದಲೂ ಅನುಭವದಲ್ಲಿ ಪರ್ಯವಸಾನವಾಗುವದರಿಂದಲೂ ಎಲ್ಲ ಭಿನ್ನ ಭಿನ್ನ ಧರ್ಮ, ಮತ, ಪಂಥಗಳಿಗೂ ಸಮ್ಮತವಾಗುತ್ತದೆ. "ನಾನ್ಯಃ ಪಂಥಾ ದ್ವಿತೀಯಾಯ " ಎಂಬ ಶ್ರುತ್ಯುಕ್ತಿಯಂತೆ ಇದೊಂದೇ ದಾರಿಯು ಮೋಕ್ಷಕ್ಕೆ ಮತ್ತೊಂದು ದಾರಿಯಿಲ್ಲ. ಇದ್ದದ್ದನ್ನು ಇದ್ದಂತೆ ತಿಳಿದುಕೊಳ್ಳುವದೇ ಜ್ಞಾನ; ಅದು ವಸ್ತುತಂತ್ರವಾಗಿರುತ್ತದೆ; ಉಪಾಸನೆಯಂತೆ ಕರ್ತೃತಂತ್ರವೂ ಕಲ್ಪಿತವೂ ಅಲ್ಲ. ಸುಡುತ್ತದೆಂದು ಅನುಭವಜ್ಞಾನದ ಮಾತನ್ನು ಹೇಳಿದರೆ ಅಲ್ಲಗಳೆಯುವರಾರು? ಅದರಂತೆ ಮೊದಲೇ ಇದ್ದ ಗುರುತ್ವಾಕರ್ಷಣ ಶಕ್ತಿಯನ್ನು ನ್ಯೂಟನ್ನನು ಪ್ರಯೋಗಾನುಭವಗಳಿಂದ ಶೋಧಮಾಡಿ ಸಿದ್ಧಮಾಡಿ ತೋರಿಸಿದ್ದನ್ನು ಯಾವ ವಿಚಾರವಂತನು ನಿರಾಕರಿಸುವನು? ಆತ್ಮತತ್ತ್ವ ವಿಚಾರವೂ ಹಾಗೆಯೇ. ಉಪನಿಷದೃಷಿಗಳು ಪ್ರಯೋಗಮಾಡಿ ಶೋಧ ಮಾಡಿ ಸಿದ್ಧಪಡಿಸಿದ ಆತ್ಮತತ್ತ್ವವನ್ನೂ ಅದರ ಜ್ಞಾನದಿಂದುಂಟಾಗುವ

ಮೋಕ್ಷಫಲವನ್ನೂ ಯಾವ ಬುದ್ಧಿವಂತನು ಅಲ್ಲಗಳೆದಾನು? ಇಂಥ ತತ್ತ್ವ ಸಿದ್ಧಾಂತಗಳು ಸರ್ವಸಮ್ಮತಗಳೂ ಅಪೌರುಷೇಯುವಾದವುಗಳೂ ಎಂದರೆ ಶೋಧನಾಡಿದ ಮತ್ತು ಮಾಡುವ ಪುರುಷನನ್ನು ಅವಲಂಬಿಸದೆ ಅವನಿಲ್ಲದಿದ್ದಾಗಲೂ ಎಂದೆಂದಿಗೂ ಇರುವಂಥವುಗಳೂ ಯಾವ ಆಚಾರ್ಯರು ಮಹಾಪುರುಷರು ಎಂಬ ವ್ಯಕ್ತಿಗಳ ಹಂಗಿಲ್ಲದೆ ಇರುವಂಥವುಗಳೂ ಇರುವವೆಂದು ಬೇರೆ ಹೇಳುವ ಅವಶ್ಯಕತೆಯಿಲ್ಲ. ಆದ್ದರಿಂದ ಇಲ್ಲಿ ವ್ಯಕ್ತಿಪೂಜೆಗೆ, (Hero—Worship) ವ್ಯಕ್ತಿಯ ಅಭಿಪ್ರಾಯಕ್ಕೆ ವ್ಯಕ್ತಿಯಿಂದ ಹುಟ್ಟಿದ ಧರ್ಮ, ಪಂಥ ಮತ್ತು ಸಿದ್ಧಾಂತಗಳಿಗೆ ಏನೂ ಮಹತ್ವವಿಲ್ಲ.

**ನಾಸ್ತಿಕರಿಗೂ ಸಮ್ಮತ:** ಈ ವಿಚಾರ ಮಾರ್ಗದ ಒಂದು ವೈಶಿಷ್ಟ್ಯವನ್ನು ನಾವು ಗಮನಿಸಬೇಕು. ಇದು ಸಾರ್ವತ್ರಿಕ ಅನುಭವದ ಆಧಾರದ ಮೇಲೆ ನಿಂತಿರುವದರಿಂದ ಮತ್ತು ಕೊನೆಗೆ ನಿರ್ಣಾಯಕ ಆತ್ಮಾನುಭವದಲ್ಲಿ ಪರ್ಯಾವಸಾನವಾಗುವದರಿಂದ, ದೇವರ ಅಸ್ತಿತ್ವದಲ್ಲಿ ನಂಬಿಗೆಯಿಲ್ಲದ ಬೌದ್ಧ, ಜೈನ ಮೊದಲಾದ ನಾಸ್ತಿಕರಿಗೂ ಕಮ್ಯುನಿಷ್ಟರಿಗೂ ಎಲ್ಲ ವಿಚಾರವಂತ ಮಾನವರಿಗೂ ಅವರ ಜನಾಂಗ, ದೇಶ, ಧರ್ಮ, ಜಾತಿ, ಪಂಥ, ಭಾಷೆ ಏನೇ ಇರಲಿ ಮಾನ್ಯವಾಗಲೇ ಬೇಕು. ದೇವರ ಅಸ್ತಿತ್ತ್ವದಲ್ಲಿ ನಂಬುಗೆ ಇರಲಿಕ್ಕಿಲ್ಲ. ಅದು ನಂಬುಗೆಯ ವಿಷಯವಾಯಿತು. ತನ್ನ ಅಸಿತ್ವವನ್ನೇ ನಂಬದ ಮನುಷ್ಯನಾರು? ಮೇಲಾಗಿ ತಾನು ಇದ್ದದ್ದು ತನ್ನ ಸ್ವಂತ ಅನುಭವಸಿದ್ಧ ಮಾತಿದ್ದರಿಂದ ಇಲ್ಲಿ ನಂಬಿಗೆಯಿಡುವ ಮಾತಾದರೂ ಯಾಕೆ? ಆದ್ದರಿಂದಲೇ ಈ ವಿಜ್ಞಾನಯುಗದಲ್ಲಿ ಜಾಗತಿಕ ಐಕ್ಯ ಶಾಂತಿ-ಸಂವರ್ಧನೆಯ ಉದ್ದೇಶವುಳ್ಳ ಅಂತರ್ರಾಷ್ಟ್ರೀಯ ಸಂಸ್ಥೆಗಳೆಲ್ಲ ಈ ಆತ್ಮವಿಜ್ಞಾನಶಾಸ್ತ್ರಕ್ಕೆ ಶರಣು ಹೋಗುತ್ತವೆ. ಬಾಹ್ಯ ಭೌತಿಕವಿಜ್ಞಾನಶಾಸ್ತ್ರಕ್ಕೆ ಅದರ ಸಂಶೋಧನೆಗಳಿಗೆ ಮಹತ್ವವನ್ನು ಕೊಟ್ಟಂತೆ ಈ ಅಧ್ಯಾತ್ಮ ವಿಜ್ಞಾನಶಾಸ್ತ್ರಕ್ಕೂ ಅಷ್ಟೇ, ಅಥವಾ ಅದಕ್ಕೂ ಹೆಚ್ಚು ಪುರಸ್ಕಾರವನ್ನು ಕೊಡುವದೂ ಅಂಥ ಆತ್ಮವಿಜ್ಞಾನಿಗಳಿಗೆ ಅಗ್ರಪ್ರಾಶಸ್ತ್ಯವನ್ನು ಕೊಡುವದೂ ಜಗತ್ತಿನ ಐಕ್ಯ, ಶಾಂತಿ, ಸುಖಗಳಿಗೆ ಉತ್ತೇಜಕವಾಗುವವು.

**ಆತ್ಮವಿಜ್ಞಾನಯೋಗವು ಸಮಾಜ ರಕ್ಷಕವು :** ಆತ್ಮವಿಜ್ಞಾನಿಗಳು ಸಮಾಜದಲ್ಲಿ ಹೆಚ್ಚು ಹೆಚ್ಚು ಹುಟ್ಟಿದಂತೆ ಸಮಾಜ ಸ್ವಾಸ್ಥ್ಯವೂ ಶಾಂತಿಸುಖಗಳೂ ಐಕ್ಯವೂ ವೃದ್ಧಿಗೊಂಡು ಕಳೆಗೊಳ್ಳುವವು. ಒಬ್ಬ ಆತ್ಮ ವಿಜ್ಞಾನಿಯೆಂದರೆ ನೂರು ಹೈಡ್ರೊಜನ್ ಬಾಂಬುಗಳಿದ್ದಂತೆ. ಭಾಷಣಗಳ ಅವಶ್ಯಕತೆಯಿಲ್ಲದೆ ಅಂಥವರ ಬರೀ ಅಸ್ತಿತ್ವದಿಂದಲೇ ಸಹವಾಸದಿಂದಲೇ ಅವರು ತಮ್ಮ ಸಹಜ ಜೀವನದಿಂದ ನಿರ್ಮಿಸಿದ ವಾತಾವರಣದಿಂದಲೇ, ಅವರ ಉಸಿರಿನಿಂದಲೇ ಮಾನವ ಸಮಾಜದ ನೀತಿಮಟ್ಟವು ಏರಿ ಜಗತ್ತಿನಲ್ಲಿ ಸುಖ ಶಾಂತಿಗಳು ನೆಲೆಗೊಳ್ಳುವವು.

ಈ ಆತ್ಮವಿಜ್ಞಾನಯೋಗವನ್ನೇ ಶ್ರೀ ಕೃಷ್ಣಪರಮಾತ್ಮನು ಲೋಕ ಸಂಗ್ರಹಕ್ಕಾಗಿ, ಲೋಕಕಲ್ಯಾಣಕ್ಕಾಗಿ ಅವಶ್ಯವೆಂಬ ಸಿದ್ಧಾಂತವನ್ನು ಗೀತೆಯಲ್ಲಿ "ಅರ್ಜುನ, ಈ ಯೋಗವನ್ನು ನಾನು ಮೊದಲು ಆದಿತ್ಯನಿಗೆ, ಜಗತ್ತನ್ನು ಕಾಪಾಡುವ ಕ್ಷತ್ರಿಯರಿಗೆ ಬಲವನ್ನು ಕೊಡುವದಕ್ಕಾಗಿ ಹೇಳಿದೆನು ಅವನು ಮನುವಿಗೆ, ಮನುವು ಇಕ್ಷ್ವಾಕುವಿಗೆ ಹೇಳಿ ಹೀಗೆ ಪರಂಪರೆಯಿಂದ ಬಂದ ಯೋಗವನ್ನು ರಾಜರ್ಷಿಗಳು ಬಲ್ಲವರಾಗಿದ್ದರು. ಬಹುಕಾಲದ ಮೇಲೆ ಅದು ಈಗ ನಷ್ಟವಾಗಿದೆ. ಆ ಪುರಾತನ ಯೋಗವನ್ನೇ ನಾನು ಈಗ ನಿನಗೆ ಹೇಳುತ್ತೇನೆ!" ಎಂದು ಹೇಳಿರುತ್ತಾನೆ. ಇಂಥ ಯೋಗ ನಿಷ್ಠರಾದ ರಾಜರ್ಷಿಗಳೂ ಋಷಿ–ಕ್ಷತ್ರಿಯರೂ ಜಗತ್ತನ್ನು ಸರ್ವನಾಶದಿಂದ ಪಾರುಮಾಡಿ ಸರಿಯಾದ ಮಾರ್ಗ ತೋರಿಸಿ ಜಗತ್ತಿನ ಶಾಂತಿ ಪುಷ್ಟಿ ತುಷ್ಟಿ ಗಳಿಗೆ ಸ್ಫೂರ್ತಿಯ ಸೆಲೆಯಾಗಬಲ್ಲರು. ಜಗತ್ತಿನಲ್ಲಿ, ವಿಶೇಷತಃ ನಮ್ಮ ಪುಣ್ಯಭೂಮಿಯಾದ ಭಾರತದೇಶದಲ್ಲಿ ಅಂಥ ಮಹಾಪುರುಷರು ಹೆಚ್ಚು ಹೆಚ್ಚಾಗಿ ಉದಯಿಸಲಿ ಎಂದು ಪರಮಾತ್ಮನನ್ನು ಪ್ರಾರ್ಥಿಸೋಣ.



## ಶ್ರೀ ಆತ್ಮಾನಂದ ಅಧ್ಯಾತ್ಮ ಪ್ರಕಾಶನದ ಪ್ರಕಟಿಸೆಗಳು

| | | |
|---|---|---|
| ೧. | ಶ್ರೀ ಶಿವಾನಂದ ಸ್ವಾಮಿಗಳವರ ಜೀವನ ಭೋಧಾಮೃತ | ೨ ೦೦ |
| ೨. | ಅಧ್ಯಾತ್ಮ ಪ್ರವಚನ ಸಂಗ್ರಹ | ೨—೫೦ |
| ೩. | ನಿಜಸುಖ ಮಾರ್ಗ ಪ್ರದೀಪ | ೧—೫೦ |
| ೪. | ಕಾಮ ದಹನ | ೧—೫೦ |
| ೫ | ಸ್ವರೂಪ ಮಾರ್ಗದರ್ಶಕ | ೧—೫೦ |
| ೬. | Self Realisation | ೧—೦೦ |
| ೭. | First Intuition | ೧—೦೦ |
| ೮. | Eternal Peace | ೨—೦೦ |
| ೯. | ಆತ್ಮ ಸಾಕ್ಷಾತ್ಕಾರ | ೧—೦೦ |
| ೧೦. | ನಿಜವಾದ ನಾನು ಯಾರು ? | ೧—೫೦ |
| | ಲೇ : ಸುರೇಂದ್ರ ದೇಸಾಯಿ ಎಮ್. ಎ. (ಧಾರವಾಡ) | |
| ೧೧. | Who am I really ? by Surendra Desai, M. A. Dharwad | ೪—೦೦ |
| ೧೨. | ಪ್ರಥಮಾನುಭೂತಿ | ೧—೦೦ |

# ಲೇಖಕರ ಅಲ್ಪ ಪರಿಚಯ

ಶ್ರೀ ಸುರೇಂದ್ರರಾವ ಶಿವರಾವ ದೇಸಾಯಿಯವರು ಧಾರವಾಡ ಜಿಲ್ಹೆಯ ಕಲಘಟಗಿ ತಾಲೂಕಿನ ಜಮ್ಮೀಹಾಳದವರು. ದೇಸಾಯೀಯವರು ೮೭ ವರ್ಷದ ವಯೋವೃದ್ಧರೂ. ಅಷ್ಟೇ ಅಲ್ಲ ಜ್ಞಾನವೃದ್ಧರೂ ಇದ್ದರು. ದೇಸಾಯಿಯವರು ನೀತಿಷ್ಠರೂ. ಪ್ರತ್ಯಗಾತ್ಮಪ್ರವಣ ನಿಷ್ಠರೂ ಆಗಿದ್ದರು. ಇವರು ಅತಿ ವಿನಯ ಸಂಪನ್ನರಿದ್ದರು. ಇವರು ಭಗವದ್ಗೀತೆ ಉಪನಿಷತ್ತು ಮತ್ತು ಶಂಕರ ಭಾಷ್ಯಗಳನ್ನು ಆಳವಾಗಿ ಅಭ್ಯಾಸ ಮಾಡಿದ್ದರು ಅವರು ಜೀವದ ಸಚ್ಚಿದಾನಂದ ಸ್ವರೂಪವನ್ನು ಅತಿಸುಲಭವಾದ ರೀತಿಯಿಂದ ಅನುಭವಿಸುವ ಮಾರ್ಗವನ್ನು ತಮ್ಮ ಈ ಗ್ರಂಥದಲ್ಲಿ ತೋರಿಸಿಕೊಟ್ಟಿದ್ದಾರೆ.

ದೇಸಾಯಿಯವರದು ಬಹುಮುಖವಾದ ಸೇವೆ. ೧೯೨೧ರಲ್ಲಿ ಗಾಂಧೀ ಯುಗ ಆರಂಭವಾದೊಡನೆ ಧಾರವಾಡ ವಿಕ್ಟೋರಿಯಾ ಹೈಸ್ಕೂಲಿನ ತಮ್ಮ ಶಿಕ್ಷಕ ಸ್ಥಾನಕ್ಕೆ ರಾಜೀನಾಮೆ ಕೊಟ್ಟು, ಕರ್ನಾಟಕ ರಾಷ್ಟ್ರೀಯ ಮಹಾ ವಿದ್ಯಾಲಯದ ಸ್ಥಾಪನೆಗೆ ಮುಂದಾದರು. ಮುಖ್ಯಾಧ್ಯಾಪಕರಾಗಿಯೂ, ಕರ್ನಾಟಕ ಶಿಕ್ಷಣ ಸಮಿತಿಯ ಕಾರ್ಯದರ್ಶಿಗಳಾಗಿಯೂ. "ಸ್ವಧರ್ಮ" ಮಾಸಪತ್ರಿಕೆಯ ಸಂಪಾದಕರಾಗಿಯೂ ಸೇವೆ ಸಲ್ಲಿಸಿದರು. ೧೯೩೦-೫೦ರ ವರೆಗೆ ನೆರೆಹೊರೆಯ ಗ್ರಾಮಗಳಲ್ಲಿ ಪ್ರಾಥಮಿಕ ಶಾಲೆ, ಪ್ರೌಢರಿಗಾಗಿ ರಾತ್ರಿ ಶಾಲೆ ಸ್ಥಾಪಿಸಿ ಗ್ರಾಮ ಸುಧಾರಣೆಯ ಕಾರ್ಯ ಮಾಡಿದ್ದರು, ೧೯೫೭ ೭೫ರ ವರೆಗೆ ಧಾರವಾಡದಲ್ಲಿಯ ತತ್ತ್ವಾನ್ವೇಷಣ ಮಂದಿರವನ್ನು ಪುನರುಜ್ಜೀವನಗೊಳಿಸಿ, ಸುವ್ಯವಸ್ಥಿತವಾಗಿ ನಡೆಯುವಂತೆ ಮಾಡಿದರು.

ದೇಸಾಯಿಯವರ ಅನೇಕ ವಿದ್ವದನುಭವ ಪೂರ್ತಿ ಲೇಖನಗಳು "ಅಧ್ಯಾತ್ಮ ಪ್ರಕಾಶ" ಮುಂತಾದ ಪತ್ರಿಕೆಗಳಲ್ಲಿ ಕಾಣಿಸಿಕೊಂಡಿವೆ. ಅವರು "ಆತ್ಮಜ್ಞಾನ ಸುಧೆ" ಎಂಬ ಗ್ರಂಥದಲ್ಲಿ ಭಗವದ್ಗೀತಾಮೃತವನ್ನು ನೀಡಿದ್ದಾರೆ. ಈ "ನಿಜವಾದ ನಾನು ಯಾರು?" ಎಂಬುದು ಅವರ ಎರಡನೆಯ ತತ್ತ್ವಜ್ಞಾನಾನುಭವದ ಉತ್ಕೃಷ್ಟ ಕೃತಿಯಾಗಿದೆ. ಇದೇ ಜನೆವರಿ ೧೨ರಂದು ಶ್ರೀ ದೇಸಾಯಿಯವರು ವ್ಯಾವಹಾರಿಕವಾಗಿ ಭೌತಿಕ ಶರೀರವನ್ನು ಬಿಟ್ಟರಾದರೂ ಈ ಪುಸ್ತಕದಲ್ಲಿ ಅವರ ಧ್ವನಿ ಘಂಟಾ ಘೋಷಣೆಯಂತೆ ಕೇಳಿ ಬರುತ್ತಿದೆ. ಅವರು ಸಚ್ಚಿದಾನಂದವೇ ಇದ್ದಾರೆ.